KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಏಪ್ರಿಲ್ ೨೭, ೨೦೦೬ (ವೈಶಾಖ ೭, ಶಕ ವರ್ಷ ೧೯೨೮) | ಸಂಚಿಕೆ ೧೭ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಮುಖ್ಯಮಂತ್ರಿಯವರ ಕಾರ್ಯದರ್ಶಿ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 460 ಸೆಆಸೇ 200, ದಿನಾಂಕ: 20.09.2005.

**ಪ್ರಸ್ತಾವನೆ:**

ಮೇಲೆ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ದಿನಾಂಕ: 05.08.2005ರ ಮಹಾಲೇಖಪಾಲರ ಪತ್ರವನ್ನು ಲಗತ್ತಿಸಿ ಅದರಲ್ಲಿ ಕೋರಿರುವಂತೆ ಮುಖ್ಯಮಂತ್ರಿಯವರ ಕಾರ್ಯದರ್ಶಿ ಹುದ್ದೆಯ ಅವಧಿಯು ದಿನಾಂಕ: 31.03.2005ಕ್ಕೆ ಮುಕ್ತಾಯಗೊಳ್ಳುವುದರಿಂದ ದಿನಾಂಕ: 01.04.2005 ರಿಂದ ಮುಂದುವರೆಸುವಂತೆ ಕೋರಿರುತ್ತಾರೆ.

ಮುಖ್ಯಮಂತ್ರಿಯವರ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ: 06.11.2004 ರಿಂದ ಕೇಡರ್ ಹುದ್ದೆಯೆಂದು ಹಾಗೂ ಕಾರ್ಯದರ್ಶಿ ಹುದ್ದೆಯನ್ನು ಎಕ್ಸ್-ಕೇಡರ್ ಹುದ್ದೆ ಎಂದು ಗುರುತಿಸಿರುವ ಹಿನ್ನೆಲೆಯಲ್ಲಿ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಕೇಡರ್ ಹುದ್ದೆ ಎಂದು ಗುರುತಿಸಿದ ದಿನಾಂಕದಿಂದ ಮುಖ್ಯ ಮಂತ್ರಿಯವರ ಕಾರ್ಯದರ್ಶಿ ಹುದ್ದೆಯನ್ನು ಎಕ್ಸ್-ಕೇಡರ್ ಹುದ್ದೆಯಲ್ಲಿ ಸೃಜಿಸುವುದು ಅಗತ್ಯವೆಂದು ಕಂಡುಬಂದಿರುತ್ತದೆ. ಆದ್ದರಿಂದ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 62 ಸಸಿವಿ 2005, ದಿನಾಂಕ:25ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಮುಖ್ಯಮಂತ್ರಿಯವರ ಕಾರ್ಯದರ್ಶಿ-1, ಹುದ್ದೆಯನ್ನು ದಿನಾಂಕ: 06.11.2004 ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೃಜಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ದಿನಾಂಕ: 05.01.2006ರ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 1967/ ವೆಚ್ಚ-5/ 2005 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2).

ಪಿ.ಆರ್.461

**ವಿಷಯ:** ಶ್ರೀ ಕೆ. ನಾಗರಾಜ್, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ-ಆರೋಪ ಮುಕ್ತರನ್ನಾಗಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1. ನೋಟೀಸ್ ಸಂಖ್ಯೆ: ಸಿಆಸುಇ 127 ಎಸ್‌ಇಎನ್ 05 ದಿನಾಂಕ: 11.10.2005.

2. ಶ್ರೀ ಕೆ. ನಾಗರಾಜ್, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರ ದಿನಾಂಕ: 15.12.2005ರ ಉತ್ತರ.

**ಪ್ರಸ್ತಾವನೆ:**

ಕೊಪ್ಪಳ ಜಿಲ್ಲೆ ಕೊಪ್ಪಳ ಉಪ ವಿಭಾಗಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಕೆ. ನಾಗರಾಜ್, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರು ಕೊಪ್ಪಳ ತಾಲ್ಲೂಕು, ಹಿರೇಕಸನಕಂಡಿ ಮತ್ತು ಹಿರೇಬಾಗನಾಳ ಗ್ರಾಮಗಳಲ್ಲಿ ಸ್ಪಾಂಜ್ ಐರ್ನ್ ಫ್ಯಾಕ್ಟರಿ ಪ್ರಾರಂಬಿಸುವ ಸಂಬಂಧ ಸದರಿ ಗ್ರಾಮಗಳಲ್ಲಿನ ಜಮೀನೊಂದನ್ನು ಭೂ ಪರಿವರ್ತನೆ/ ಫ್ಯಾಕ್ಟರಿ ಪ್ರಾರಂಭಿಸಲು ಲೈಸೆನ್ಸ್‌ನ್ನು ನೀಡಿರುವ ಸಂಬಂಧ ಶ್ರೀ ಸಂಗಣ್ಣಗೌಡ ಪೊಲೀಸ್ ಪಾಟೀಲ್

ಅವರು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 16958/ 2005 (ಜಿ.ಎಮ್/ ಪಿ.ಐ.ಎಲ್.) ಸಲ್ಲಿಸಿದ್ದ ಸಂಬಂಧ ಸರ್ಕಾರಿ ವಕೀಲರಿಗೆ ಅವಶ್ಯವಾಗಿ ಬೇಕಾಗಿರುವ ಮಾಹಿತಿಗಳನ್ನು ಒದಗಿಸಲು ವಿಫಲರಾಗಿರುವ ಆರೋಪಕ್ಕಾಗಿ ಅವರಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ: 11.10.2005ರ ನೋಟೀಸನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 12ರನ್ವಯ ಜಾರಿ ಮಾಡುವುದರ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಸದರಿ ನೋಟೀಸಿಗೆ ಆರೋಪಿತ ಅಧಿಕಾರಿಯ ಮೇಲೆ (2)ರಲ್ಲಿ ಓದಲಾದ ದಿನಾಂಕ: 15.12.2005ರಂದು ಉತ್ತರ ಸಲ್ಲಿಸಿ ಶ್ರೀ ಸಂಗಣ್ಣಗೌಡ ಪೊಲೀಸ್ ಪಾಟೀಲ್ ಅವರು ಉಚ್ಚ ನ್ಯಾಯಾಲಯಕ್ಕೆ ಸಲ್ಲಿಸಿದ ರಿಟ್ ಅರ್ಜಿ ಸಂಖ್ಯೆ: 16958/ 2005ರ ಸಂಬಂಧ ಸರ್ಕಾರಿ ವಕೀಲರು ಕಳುಹಿಸಿರುವ ಫ್ಯಾಕ್ಸ್ ಸಂದೇಶವನ್ನು ಕೊಪ್ಪಳ ಜಿಲ್ಲಾಧಿಕಾರಿಗಳು ದಿನಾಂಕ: 22.07.2005ರಂದು ಸ್ವೀಕರಿಸಿ ಮುಂದಿನ ಕ್ರಮ ಕೈಗೊಳ್ಳುವಂತೆ ಅವರ ಕೇಂದ್ರಸ್ಥಾನಿಕ ಸಹಾಯಕರಿಗೆ ಕೊಟ್ಟಿರುತ್ತಾರೆ. ಇದನ್ನು ತಮಗೆ ಸಕಾಲದಲ್ಲಿ ಕಳುಹಿಸಿ ಕೊಡದೆ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ವಿಳಂಬವಾಗಿದ್ದುದರಿಂದ ಸರ್ಕಾರಿ ವಕೀಲರಿಗೆ ಸರಿಯಾದ ಸಮಯದಲ್ಲಿ ಮಾಹಿತಿ ಒದಗಿಸಲು ವಿಳಂಬವಾಗಿರುವುದೆಂದು ತಿಳಿಸಿ, ಉಚ್ಚ ನ್ಯಾಯಾಲಯದಿಂದ ಬಂದ ಸಂದೇಶಗಳ ಮೇಲೆ ಖುದ್ದಾಗಿ ಉಚ್ಚ ನ್ಯಾಯಾಲಯಕ್ಕೆ ಹೋಗಿ ಹಲವಾರು ಪ್ರಕರಣಗಳಲ್ಲಿ ಅಫಿಡವಿಟ್‌ಗಳನ್ನು ವ್ಯವಸ್ಥಿತವಾಗಿ ಸಲ್ಲಿಸಿರುತ್ತೇನೆಂದು ತಿಳಿಸಿರುತ್ತಾರೆ. ಮೇಲಿನ ಸರ್ಕಾರಿ ವಕೀಲರಿಂದ ಬಂದ ಫ್ಯಾಕ್ಸ್ ಸಂದೇಶವನ್ನು ತಮಗಾಗಲೀ ತಮ್ಮ ಕಛೇರಿಗಾಗಲೀ ಕಳುಹಿಸಿ ಕೊಟ್ಟಿದ್ದರೆ ಮಾನ್ಯ ಮುಖ್ಯ ಕಾರ್ಯದರ್ಶಿಯವರು ಉಚ್ಚ ನ್ಯಾಯಾಲಯಕ್ಕೆ ಹಾಜರಾಗದಂತೆ ಕ್ರಮವಹಿಸುತ್ತಿದ್ದೇನೆಂದು ತಿಳಿಸಿ ಇದರಿಂದ ತಮ್ಮದೇನೂ ತಪ್ಪಿಲ್ಲದಿರುವುದರಿಂದ ತಮ್ಮನ್ನು ಆರೋಪಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ.

ಆರೋಪಿತರು ಸಲ್ಲಿಸಿರುವ ಉತ್ತರವನ್ನು ಪರಿಶೀಲಿಸಲಾಗಿ, ಸರ್ಕಾರಿ ವಕೀಲರಿಂದ ಬಂದ ಫ್ಯಾಕ್ಸ್ ಸಂದೇಶವು ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಸಾಕಷ್ಟು ವಿಳಂಬವಾಗಿರುವುದು ಮತ್ತು ಮೇಲ್ವಿಚಾರಣೆಲೋಪ ಉದ್ಭವಿಸಿರುವುದು ಕಂಡು ಬರುತ್ತದೆ. ಜಿಲ್ಲಾಧಿಕಾರಿಗಳು ಮತ್ತು ಉಪ ವಿಭಾಗದ ಕಛೇರಿಗಳ ನಡುವೆ ಸಮರ್ಪಕ ಸಮನ್ವಯ ಲೋಪವಿರುವುದು ಕಂಡುಬರುತ್ತದೆ. ಈ ಪ್ರಕರಣದಲ್ಲಿ ಉಪ ವಿಭಾಗಾಧಿಕಾರಿಯೊಬ್ಬರನ್ನು ಈ ಘಟನೆಗೆ ನೇರವಾಗಿ ಜವಾಬ್ದಾರರನ್ನಾಗಿ ಮಾಡಲು ಸಮರ್ಥನೀಯ ಕಾರಣಗಳು ಇಲ್ಲದಿದ್ದರೂ ಸಹ ಸರ್ಕಾರಿ ವಕೀಲರ ಪತ್ರ ದಿನಾಂಕ:15.07.2005ರ ಪ್ರತಿಯನ್ನು ಸಹಾಯಕ ಆಯುಕ್ತರು, ಕೊಪ್ಪಳ ಇವರಿಗೂ ಸಹ ಕಳುಹಿಸಲಾಗಿರುವುದನ್ನು ಗಮನಿಸಲಾಗಿ ಈ ಬಗ್ಗೆ ಸೂಕ್ಷ್ಮತೆಯನ್ನು ಅರಿತು ಉಪವಿಭಾಗಾಧಿಕಾರಿಗಳು Suomoto ಕಾರ್ಯೋನ್ಮುಖರಾಗಬಹುದಾಗಿತ್ತು. ಈ ಹಿನ್ನೆಲೆಯಲ್ಲಿ ಆರೋಪಿತರು ಸಲ್ಲಿಸಿರುವ ಉತ್ತರವನ್ನು ಪರಿಶೀಲಿಸಿ ಅವರಿಗೆ ಎಚ್ಚರಿಕೆಯನ್ನು ನೀಡುವುದರ ಮೂಲಕ ಅವರ ವಿರುದ್ಧ ಮಾಡಲಾದ ಆರೋಪದಿಂದ ಆರೋಪಮುಕ್ತರನ್ನಾಗಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 127 ಎಸ್‌ಇಎನ್ 05, ದಿನಾಂಕ:24ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಸರ್ಕಾರವು ಶ್ರೀ ಕೆ. ನಾಗರಾಜ್, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರನ್ನು ದಿನಾಂಕ: 11.10.2005ರ ನೋಟೀಸಿನಲ್ಲಿ ಮಾಡಲಾದ ಆರೋಪದಿಂದ ಆರೋಪಮುಕ್ತರನ್ನಾಗಿಸುತ್ತದೆ ಹಾಗೂ ಇನ್ನು ಮುಂದೆ ಈ ರೀತಿಯ ಪ್ರಸಂಗಗಳಿಗೆ ಅವಕಾಶ ಉಂಟಾಗದಂತೆ ಜಾಗ್ರತೆ ವಹಿಸಲು ಈ ಮೂಲಕ ಎಚ್ಚರಿಕೆ ನೀಡಲಾಗಿದೆ.

ಈ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್.462

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳೂ-3).

## ENERGY SECRETARIAT

**Sub:** Enhancement of allotted capacity of Wind Power Project from 5.00 MW to 11.55 MW in favour of M/s Bhoruka Power Corporation Limited-reg.

**Read:** 1. Government Order No.EN 318 NCE 2005, Dated: 20.10.2005.

2. Letter No. KRED/08/ BPCL/ 2006/ 648, Dated: 22.03.2006 received from the Managing Director, Karnataka Renewable Energy Development Limited, Bangalore.

**Preamble:**

In the Government order read at (1) above, the sanction has been accorded for transfer of 5.00 MW capacity Wind Power Project at Nargund, Gadag District from M/s Sharan Powers Private Limited to M/s Bhoruka Power Corporation Limited.

After the assessment of wind potential and flow of the wind in the allotted site, the Managing Director, Karnataka Renewable Energy Development Limited, Bangalore, vide his letter read at (2) above has recommended to Government to enhance the alloted wind power capacity of 5.00 MW to 11.55 MW at Nargund, Gadag District in favour of M/s Bhoruka Power Corporation Limited.

The proposal has been examined at Government level and hence the following order:

**Government Order No. EN 136 NCE 2006, Bangalore, Dated: 23rd March, 2006**

Government is pleased to accord approval for enhancement of wind power capacity from 5.00 MW to 11.55 MW to M/s Bhoruka Power Corporation Limited at Nargund, Gadag District as detailed below:

N-W to S-E oriented ridge of about 1.7 Kms in length located on northwest of Nargund Town with 788 M elevation covered in the following geographical Co-ordinates as below:
**Latitude: $15^0$ 43' 30"-44'30"N**
**Longitude: $70^0$ 22'30"-23'30"E**
**Ridge Peak: 788m Amsl**

The other terms and conditions of the allotment order shall continue as it is.

By Order and in the Name of the Governor of Karnataka,
**SURESH B. KRISHNAPPANAVAR**
Under Secretary to Government,
Energy Department.

PR-463

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಜಿ. ಶಂಕರನಾರಾಯಣ, ಸಹಾಯಕ ಅಧೀಕ್ಷಕರು ಇವರಿಗೆ ಕೇಂದ್ರ ಕಾರಾಗೃಹ ಅಧೀಕ್ಷಕರ ಹುದ್ದೆಗೆ ಮುಂಬಡ್ತಿ ನೀಡಿದ್ದನ್ನು ಪುನರ್ ವಿಮರ್ಶಿಸುವ ಕುರಿತು.

**ಓದಲಾಗಿದೆ:** 1. ಹೆಚ್‌ಡಿ 37 ಪಿಆರ್‌ಇ 2003 ದಿನಾಂಕ: 07.06.2003.

2. ಸರ್ಕಾರದ ಆದೇಶ ಸಂಖ್ಯೆ: ಒಸಾಇ 26 ಪಿಆರ್‌ಇ 94 ದಿನಾಂಕ: 31.10.2000.
3. ಮಹಾಲೇಖಪಾಲರ ಪತ್ರ ಸಂಖ್ಯೆ: GEXI/C/PR-III/2003-04/ 253 ದಿನಾಂಕ: 19.03.2004.
4. ಕಾರಣ ಕೇಳುವ ನೋಟೀಸು ಸಂಖ್ಯೆ: ಒಸಾಇ 169 ಪಿಆರ್‌ಎ 2003 ದಿನಾಂಕ: 24.04.2004.
5. ಶ್ರೀ ಜಿ. ಶಂಕರನಾರಾಯಣ, ಸಂಶೋಧನಾ ಮತ್ತು ಅಂಕಿಅಂಶಗಳ ಅಧಿಕಾರಿ, ಇವರ ಪತ್ರ ದಿನಾಂಕ: 10.05.2004.
6. ಸರ್ಕಾರಿ ಪತ್ರ ಸಂಖ್ಯೆ: ಒಸಾಇ 169 ಪಿಆರ್‌ಇ 2003 ದಿನಾಂಕ: 22.05.2004.
7. ಸರ್ಕಾರದ ಪತ್ರ ಸಂಖ್ಯೆ: ಹೆಚ್‌ಡಿ 169 ಪಿಆರ್‌ಇ 2003 ದಿನಾಂಕ: 01.07.2004.
8. ಪೊಲೀಸ್ ಕಮೀಷನರ್, ಬೆಂಗಳೂರು, ಇವರ ಪತ್ರ ಸಂಖ್ಯೆ:3/ಡಿಇ-1/ ಇತರೆ/ 04 ದಿನಾಂಕ: 16.07.2004.
9. ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 151 ಪಿಆರ್‌ಇ 2004, ದಿನಾಂಕ: 20.06.2005.
10. ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕ ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರು, ದಿನಾಂಕ: 22.11.2005.

ಉಲ್ಲೇಖ (1)ರಲ್ಲಿ ಓದಲಾಗಿರುವ ಅಧಿಸೂಚನೆಯಲ್ಲಿ ಶ್ರೀ ಜಿ. ಶಂಕರನಾರಾಯಣ, ಸಹಾಯಕ ಅಧೀಕ್ಷಕರು, ಇವರಿಗೆ ದಿನಾಂಕ: 30.09.2000 ರಿಂದಲೇ ಜಾರಿಗೆ ಬರುವಂತೆ ಕೇಂದ್ರ ಕಾರಾಗೃಹ ಅಧೀಕ್ಷಕರ ಹುದ್ದೆಗೆ ಪದೋನ್ನತಿ ನೀಡಿ ಕೇಂದ್ರ ಕಛೇರಿಯಲ್ಲಿನ ಸಂಶೋಧನಾ ಹಾಗೂ ಅಂಕಿಅಂಶಗಳ ಅಧಿಕಾರಿಗಳ ಹುದ್ದೆಗೆ ನೇಮಿಸಲಾಗಿದೆ.

2) ಶ್ರೀ ಶಂಕರನಾರಾಯಣರವರು ದಿನಾಂಕ: 31.10.2000 ರಿಂದ 31.10.2002ರ ಅವಧಿಯಲ್ಲಿ ಉಲ್ಲೇಖ (2)ರಲ್ಲಿರುವ ಆದೇಶದನ್ವಯ ದಂಡನಾದೇಶದಲ್ಲಿ ಇದ್ದರು. ಆದುದರಿಂದ ಇವರಿಗೆ ದಿನಾಂಕ: 30.09.2000 ರಿಂದ ಅನ್ವಯವಾಗುವಂತೆ ಬಡ್ತಿ ನೀಡಿರುವ ಕ್ರಮ ಸರಿ ಇಲ್ಲದಿರುವುದನ್ನು ಮತ್ತು ಪುನರ್ ವಿಮರ್ಶಿಸಿ, ಇವರಿಗೆ ಪೂರ್ವಾನ್ವಯವಾಗಿ ನೀಡಲಾದ ಮುಂಬಡ್ತಿ ವಿಷಯವನ್ನು ಪುನರ್ ಪರಿಶೀಲಿಸಿ Currency of Penalty Period ಮುಗಿದ ನಂತರ ಅನ್ವಯವಾಗುವ ದಿನಾಂಕದಿಂದ ಜಾರಿಗೆ ಬರುವಂತೆ ಮುಂಬಡ್ತಿಯನ್ನು ನೀಡಬೇಕಾಗಿದೆ. ಅದರಂತೆ ಶ್ರೀಯುತರಿಗೆ ನೀಡಿರುವ ಪದೋನ್ನತಿಯನ್ನು ಪುನರ್ ವಿಮರ್ಶಿಸುವ ಮುನ್ನ ಶ್ರೀಯುತರಿಗೆ ನೋಟೀಸ್ ನೀಡಿ ಪೂರ್ವಾನ್ವಯವಾಗಿ ನೀಡಲಾದ ಮುಂಬಡ್ತಿಯನ್ನು ಏಕೆ ಹಿಂದಕ್ಕೆ ಪಡೆಯಬಾರದೆಂದು ಮತ್ತೆ ಹಾಗೆ ಹಿಂದಕ್ಕೆ ಪಡೆದ ನಂತರ ದಂಡನಾವಧಿ ಮುಗಿದ ನಂತರ ಏಕೆ ಬಡ್ತಿಯನ್ನು ನೀಡಬಾರದೆಂಬುದರ ಬಗ್ಗೆ ತಮ್ಮ ಹೇಳಿಕೆಯನ್ನು ಸದರಿ ನೋಟೀಸು ತಲುಪಿದ 15 ದಿನಗಳೊಳಗೆ ನೀಡುವಂತೆಯೂ, ಸದರಿ ಅವಧಿಯಲ್ಲಿ ಶ್ರೀಯುತರ ಹೇಳಿಕೆ ಬಾರದಿದ್ದ ಪಕ್ಷದಲ್ಲಿ ಅವರು ಹೇಳಬಯಸುವ ಹೇಳಿಕೆ ಏನೂ ಇಲ್ಲವೆಂದು ಭಾವಿಸಿ, ಕಾನೂನಿನನ್ವಯ ಮುಂದಿನ ಕ್ರಮ ಜರುಗಿಸುವುದಾಗಿ ತಿಳಿಸುತ್ತಾ, ಉಲ್ಲೇಖ (4)ರಲ್ಲಿ ಸೂಚಿಸಿರುವ ಕಾರಣ ಕೇಳುವ ನೋಟೀಸನ್ನು ಹೊರಡಿಸಲಾಗಿದೆ.

3) ಉಲ್ಲೇಖ (5)ರಲ್ಲಿ ತಮ್ಮ ಪತ್ರದಲ್ಲಿ ಶ್ರೀ ಜಿ. ಶಂಕರನಾರಾಯಣ, ಇವರು ದಿನಾಂಕ: 22.03.2004ರ ಮಹಾಲೇಖಪಾಲರ ಪತ್ರದ ಪ್ರತಿಯನ್ನು ಒದಗಿಸುವಂತೆ ಕೋರಿರುತ್ತಾರೆ.

4) ಉಲ್ಲೇಖ (5)ರ ಸರ್ಕಾರಿ ಪತ್ರದಲ್ಲಿ ಶ್ರೀ ಜಿ. ಶಂಕರನಾರಾಯಣ, ಇವರು ಕೋರಿದಂತೆ ಮಹಾಲೇಖಪಾಲರ ಪತ್ರ ದಿನಾಂಕ: 22.03.2004ರ ಪ್ರತಿಯನ್ನು ಲಗತ್ತಿಸಿ ಕಳುಹಿಸುತ್ತಾ, ಶ್ರೀ ಶಂಕರನಾರಾಯಣ, ಇವರಿಗೆ ಒದಗಿಸುವಂತೆ ಡಿ.ಜಿ. ಕಾರಾಗೃಹ, ಇವರನ್ನು ಕೋರಲಾಗಿತ್ತು. ಶ್ರೀಯುತರು ಈ ಅವಧಿಯಲ್ಲಿ RICA ದಲ್ಲಿ ತರಬೇತಿಯಲ್ಲಿದ್ದು, ಅಲ್ಲಿಗೆ ಸದರಿ ಮಹಾಲೇಖಪಾಲರ ಪತ್ರ ದಿನಾಂಕ: 22.03.2004 ಅನ್ನು ಪೊಲೀಸ್ ಮಹಾ ನಿರ್ದೇಶಕರು, ಸೆರೆಮನೆ, ಇವರಿಗೆ ಕಳುಹಿಸಿದಾಗ್ಯೂ ಅಧಿಕಾರಿಗಳು ಸ್ವೀಕರಿಸಿರುವುದಿಲ್ಲ. ಅಲ್ಲದೆ, ಇವರ ರಜಾ ಅರ್ಜಿಯಲ್ಲಿ ಮನೆ ವಿಳಾಸ ಬೆಂಗಳೂರು ಎಂದು ನಮೂದಿಸಿದ್ದು, ಸದರಿ ವಿಳಾಸಕ್ಕೆ ಕಳುಹಿಸಿದಾಗಲೂ ಅಧಿಕಾರಿಗಳು ನೋಟೀಸ್‌ನ್ನು ಸ್ವೀಕರಿಸಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಉಲ್ಲೇಖ (7)ರ ಸರ್ಕಾರದ ಪತ್ರ ದಿನಾಂಕ: 01.07.2004ರಲ್ಲಿ ಶ್ರೀಯುತರು ಕೋರಿರುವ ಮಹಾಲೇಖಪಾಲರ ಪತ್ರದ ಪ್ರತಿಯನ್ನು ಶ್ರೀ ಶಂಕರನಾರಾಯಣರಿಗೆ ವಿಳಾಸಿಸಿದ ಸರ್ಕಾರದ ಪತ್ರ ಸಂಖ್ಯೆ: ಹೆಚ್‌ಡಿ 169 ಪಿಆರ್‌ಇ 2003 ದಿನಾಂಕ: 01.07.2004ರ ಪತ್ರದೊಂದಿಗೆ ಶ್ರೀಯುತರಿಗೆ ಪೊಲೀಸ್ ಠಾಣೆಯ ಪೊಲೀಸ್ ಇನ್ಸ್‌ಪೆಕ್ಟರ್‌ರವರ ಮುಖಾಂತರ ಖುದ್ದಾಗಿ ತಲುಪಿಸಿ, ಅವರಿಂದ ಸ್ವೀಕೃತಿಯನ್ನು ಪಡೆದು ಸರ್ಕಾರಕ್ಕೆ ಸಲ್ಲಿಸಬೇಕೆಂದು ಪೊಲೀಸ್ ಕಮೀಷನರ್, ಬೆಂಗಳೂರು ಇವರನ್ನು ಕೋರಲಾಗಿತ್ತು.

5) ಅಂತೆಯೇ, ಪೊಲೀಸ್ ಕಮೀಷನರ್, ಬೆಂಗಳೂರು ಇವರ ಉಲ್ಲೇಖ (8)ರ ಪತ್ರ ದಿನಾಂಕ:16.07.2004ರಲ್ಲಿ ಶ್ರೀ ಶಂಖರನಾರಾಯಣ, ಇವರಿಗೆ ಮಹಾಲೇಖಪಾಲರ ಪತ್ರ ಹಾಗೂ ಶ್ರೀಯುತರಿಗೆ ವಿಳಾಸಿಸಿದ ಸರ್ಕಾರದ ಪತ್ರ ದಿನಾಂಕ: 01.07.2004ರ ಪತ್ರಗಳನ್ನು ತಲುಪಿಸಿ, ಸದರಿ ಪತ್ರದ ಪ್ರತಿಯ ಮೇಲೆ ಅವರು ಸ್ವೀಕರಿಸಿದ್ದಕ್ಕಾಗಿ ಸಹಿಯನ್ನು ಪಡೆದು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

6) ಉಲ್ಲೇಖ (9)ರ ಆದೇಶದ ದಿನಾಂಕ: 20.06.2005ರಲ್ಲಿ ಶ್ರೀ ಜಿ. ಶಂಕರನಾರಾಯಣ, ಇವರು ಅನಧಿಕೃತ ಗೈರುಹಾಜರಾಗಿದ್ದ ಅವಧಿಯಾದ ದಿನಾಂಕ: 06.09.2000 ರಿಂದ ದಿನಾಂಕ: 10.01.2002 ರವರೆಗಿನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮ 106-ಎ ರ ಪ್ರಕಾರ ವೇತನ ರಹಿತ ರಜೆ ಎಂದು ಆದೇಶಿಸಲಾಗಿದೆ.

7) ಉಲ್ಲೇಖ (10)ರ ಪತ್ರ ದಿನಾಂಕ: 22.11.2005ರಲ್ಲಿ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಹಾಗೂ ಕಾರಾಗೃಹಗಳ ಮಹಾ ನಿರೀಕ್ಷಕರು, ಇವರು ಸದರಿ ಅಧಿಕಾರಿಗಳಿಗೆ ದಿನಾಂಕ: 15.04.2002 ಹಾಗೂ ದಿನಾಂಕ: 01.04.2003ರಂದು ಎರಡು ವಾರ್ಷಿಕ ವೇತನ ಬಡ್ತಿಗಳನ್ನು ತಡೆಹಿಡಿಯಲಾಗಿದೆ. ಹಾಗೂ ಅವರ ಗೈರುಹಾಜರಿ ಬಗ್ಗೆ ಸಕ್ರಮಗೊಳಿಸಿದ್ದುದರಿಂದ ಅವರಿಗೆ ಕೇಂದ್ರ ಕಾರಾಗೃಹ ಅಧೀಕ್ಷಕರ ಹುದ್ದೆಗೆ ಮುಂಬಡ್ತಿ ನೀಡಬೇಕಾದ ದಿನಾಂಕದ ಬಗ್ಗೆ ಪರಿಶೀಲಿಸುವುದು ಸೂಕ್ತವಾಗಿರುತ್ತದೆ ಎಂದು ತಿಳಿಸಿದ್ದಾರೆ.

8) ಉಲ್ಲೇಖ (3)ರಲ್ಲಿ ಸೂಚಿಸಿರುವ ಮಹಾಲೇಖಪಾಲರ ಪತ್ರದಲ್ಲಿ ಶ್ರೀಯುತರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಾವಳಿಗಳು, 1957ರನ್ವಯ ಉಲ್ಲೇಖ (1)ರ ಆದೇಶದಲ್ಲಿ ನೀಡಿರುವ ದಂಡನೆಯನ್ನು ಕಾರ್ಯಗತಗೊಳಿಸಿ, ಅವರ ವೇತನ ಬಡ್ತಿಗಳನ್ನು ತಡೆಹಿಡಿದು, ತದನಂತರ, ಶ್ರೀಯುತರ ವೇತನವನ್ನು ಪುನರ್ ನಿಗದಿಪಡಿಸಿರುವ ಬಗ್ಗೆ ಮಹಾಲೇಖಪಾಲರು ಮಾಹಿತಿಯನ್ನು ನೀಡಿರುತ್ತಾರೆ. ಸದರಿ ಅಧಿಕಾರಿಗಳು ದಿನಾಂಕ: 24.04.2004ರ ಕಾರಣ ಕೇಳುವ ನೋಟೀಸ್‌ಗೆ ಇದುವರೆವಿಗೂ ಯಾವುದೇ ಲಿಖಿತ ಹೇಳಿಕೆಯನ್ನು ನೀಡಿರುವುದಿಲ್ಲ. ಆದುದರಿಂದ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಸಾಇ 169 ಪಿಆರ್‌ಇ 2003, ಬೆಂಗಳೂರು, ದಿನಾಂಕ:17ನೇ ಮಾರ್ಚ್, 2006**

ಸರ್ಕಾರದ ಅಧಿಸೂಚನೆ ಸಂಖ್ಯೆ: ಹೆಚ್‌ಡಿ 37 ಪಿಆರ್‌ಇ 2003 ದಿನಾಂಕ: 07.06.2003ರ ಆದೇಶವನ್ನು ಭಾಗಶಃ ಮಾರ್ಪಡಿಸಿ, ಶ್ರೀ ಜಿ. ಶಂಕರನಾರಾಯಣ, ಸಹಾಯಕ ಅಧೀಕ್ಷಕರು, ಇವರಿಗೆ ದಿನಾಂಕ: 30.09.2000 ರಿಂದ ಪೂರ್ವಾನ್ವಯವಾಗಿ ಕೇಂದ್ರ ಕಾರಾಗೃಹ ಅಧೀಕ್ಷಕರ ಹುದ್ದೆಗೆ ಬಡ್ತಿ ನೀಡುವ ಬದಲಾಗಿ ದಿನಾಂಕ: 07.06.2003 ರಿಂದ ಜಾರಿಗೆ ಬರುವಂತೆ ಸಹಾಯಕ ಅಧೀಕ್ಷಕರ ವೃಂದದಿಂದ ಕೇಂದ್ರ ಕಾರಾಗೃಹ ಅಧೀಕ್ಷಕರ ಹುದ್ದೆಗೆ ಪದೋನ್ನತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಸೆರೆಮನೆ ಮತ್ತು ಸಿನಿಮಾ)

ಪಿ.ಆರ್. 467

## FOREST, ECOLOGY AND ENVIRONMENT SECRETARIAT

**Sub:** Renewal of lease over 2.0135 ha. of forest land (approved area-1.2ha.) with change in land-use from tiles and clay factory to petrol pump in Sy.No.13 of Gullapura Village of Idagundi range in favour of M/s Ramanatha Tiles and Clay Factory, Yellapur Forest Division, Uttara Kannada District, Karnataka.

**Read:**
1. Letter No. A5(B3)GFL. CR.-162/88-89, Dated: 25.02.1997 of Principal Chief Conservator of Forests, Bangalore.
2. State Government letter No. FEE 3 FLL 97, Dated: 29.05.1997.
3. Letter No.F(C) A/ 11.2/ 141/ KAR/ MISC/ 1248 Dated: 18.09.2001 of Government of India, Ministry of Environment and Forests, Bangalore.
4. Letter No. A5(B3) GFL, CR-112/88-89, Dated: 26.03.2005 of Principal Chief Conservator of Forests, Bangalore.
5. State Government letter No. FEE 80 FLL 2005, Dated: 25.05.2005.
6. Letter F(C)A/ 11.2/141/ KAR/ MISC/ Dated:30.09.2005 of Government of India, Ministry of Environment and Forests, Bangalore.
7. State Government letter No. FEE 80 FLL 2005, Dated: 07.01.2006 and 02.02.2006.
8. Letter F(C)A/ 11.2/ 141/ KAR/ MISC/ 2010 Dated: 14.02.2006 of Government of India, Ministry of Environment and Forests, Bangalore.

**Preamble:**

The Principal Chief Conservator of Forests, Bangalore vide his letter Dated: 25.02.1997 read at (1) above has submitted the proposal to obtain the approval of Government of India under Section 2 of Forest (Conservation) Act, 1980 for renewal of forest land of 13.15.0 acres of land in forest Sy.No.13 of Gullapura Village in Yellapura Taluk, for the period of 20 years in favour of Managing Proprietor, Sri Ramanath Tile and Clay Industries, Ramnagar, Gullapura subject to certain conditions.

Accordingly the proposal was recommended to Government of India vide State Government letter Dated: 29.05.1997 read at (2) above.

The Government of India, Ministry of Environment and Forests, Bangalore agreed to the proposal in principle (Stage-I) under Section 2 of Forest (Conservation) Act, 1980 vide their letter dated: 12.08.2005 read at (3) above subject to fulfillment of certain conditions.

The Principal Chief Coservator of Forests, Bangalore vide his letter dated: 26.03.2005 and 12.05.2005 recommended to modify the original purpose to start the petrol pump and Agro based Industries in the leased area and the same has been sent to Government of India vide State Government letter Dated: 25.05.2005 read at (5) above.

The Government of India, Ministry of Environment and Forests, Bangalore agreed to the proposal in principle (Stage-I) for renewal of lease over 1.2 ha. of forest land with change in land-use from Tiles and Clay Factory to Petrol Pump in Sy.No.13 of Gullapura Village of Idagundi Range under Section 2 of forest (Conservation) Act, 1980 vide their letter dated: 30.09.2005 read at (6) above subject to fulfillment of certain conditions.

The Principle Chief Conservator of Forests, Bangalore submitted the compliance report vide his letter dated: 31.12.2005 and 01.02.2006 and the same has been sent to Government of India vide State Government letter Dated: 07.01.2006 and 02.02.2006 respectively read at (7) above.

Finally, Government of India Ministry of Environment and Forests, Bangalore vide their letter Dated: 14.02.2006 read at (8) above has conveyed its approval (Stage-II) under Section 2 of Forest (Conservation) Act, 1980 for renewal of lease over 1.2 ha. of forestland with change in land-use from Tiles and Clay Factory to Petrol Pump in Sy.No.13 of Gullapura Village, of Idagundi Range in favour of Ramanath Tiles and Clay Factory, Yellapur Forest Division, Uttara Kannada District Karnataka subject to certain conditions:

The proposal has been examined in detail and hence the order.

**Government Order No. FEE 80 FLL 2005, Bangalore, Dated: 23rd March, 2006**

In the Circumstances explained in the preamble above, Government are pleased to accord sanction under Section 2 of Forest (Conservation) Act, 1980 for renewal of lease over 1.2 ha. of forest land with change in land-use from Tiles and Clay Factory to Petrol Pump in Sy.No.13 of Gullapura Village, of Idagundi Range in favour of M/s Ramanath Tiles and Clay Factory, Yellapur Forest Division, Uttara Kannada District, Karnataka subject to the following conditions.

1. The legal Status of the forest land shall remain unchanged.
2. The user agency shall demarcate the area by erecting 4 feet high RCC pillars at the project cost indicating forward and back bearings and distance between adjacent pillars on them, if not done earlier.
3. The compensatory afforestation shall be raised over 4.0632 ha. of degraded forest land at the cost of user agency.
4. The penal compensatory afforestation shall be raised over 4.0632 ha. of degraded forest land at the cost of user agency.
5. All the funds obtained as Net Present Value of diverted forest land should be deposited with Compensatory Afforestation Fund Management and Planning Authority (CAMPA).
6. The total area utilized for the project shall not exceed 1.2 ha.
7. The State Government shall relocate the user agency to a place outside forest area by the year 2011.
8. Other standard conditions as applicable in respect of petrol pump projects shall apply in the instant case also.
9. The user agency shall surrender the balance area to the State Forest Department.
10. The user agency has to pay the Net Present Value (NPV) of forest land diverted under this proposal in accordance with Government Notification Dated: 17.01.2004.
11. The lessee shall pay the lease rent as fixed by the Government from time to time.
12. The land shall be utilized only for the purpose for which it was leased.
13. Any other condition to be stipulated by / Government of India/ State Government / Principal Chief Conservator of Forests, Karnataka in the interest of conservation of forests.

By Order and in the Name of the Governor of Karnataka,

**S.R. VATSALA**

Under Secretary to Government,

Forest, Ecology and Environment Department.

PR-471

## ಕಾರ್ಮಿಕ ಸಚಿವಾಲಯ

**ವಿಷಯ:** ಡಾ: ಶಾರೂಕುದ್ದೀನ್, ವಿಮಾ ವೈದ್ಯಾಧಿಕಾರಿ, ಕಾರಾವಿ ಆಸ್ಪತ್ರೆ, ಇಂದಿರಾನಗರ, ಬೆಂಗಳೂರು ಇವರ ಅನಧಿಕೃತ ಗೈರು ಹಾಜರಾತಿ-ಸೇವೆಯಿಂದ ತೆಗೆದು ಹಾಕುವ ಆದೇಶ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಕಾಇ 185 ಎಲ್ಎಸ್ಐ 2000, ದಿನಾಂಕ: 19.04.2003.

2. ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು ಇವರ ಅ.ಸ. ಪತ್ರ.ಸಂಖ್ಯೆ:GE-IX/M18/2002-03, 253-255 ದಿನಾಂಕ: 07.07.2003.

3. ನಿರ್ದೇಶಕರು, ಕಾರಾವಿ ಯೋಜನೆ (ವೈ) ಸೇವೆಗಳು ರಾಜಾಜಿನಗರ, ಬೆಂಗಳೂರು ಇವರ ಪತ್ರ ಸಂಖ್ಯೆ: ಇಎಸ್ಐಎಸ್/ ಇವಿ/ 50/99-2000, ದಿನಾಂಕ: 17.05.2004, 17.03.2005, 03.02.2006.

**ಪ್ರಸ್ತಾವನೆ:**

ಡಾ: ಶಾರೂಕುದ್ದೀನ್, ವಿಮಾ ವೈದ್ಯಾಧಿಕಾರಿ, ಕಾರಾವಿ ಆಸ್ಪತ್ರೆ, ಇಂದಿರಾನಗರ, ಬೆಂಗಳೂರು ಇವರು ಖಾಯಂ ಪೂರ್ವಾವಧಿ ಸೇವೆಯನ್ನು ತೃಪ್ತಿಕರವಾಗಿ ಪೂರೈಸುವ ಮುನ್ನವೇ ದಿನಾಂಕ: 14.07.98 ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿದ್ದರಿಂದ ಇವರು ನೇಮಕಗೊಂಡ ಹುದ್ದೆಗೆ ಸೂಕ್ತರಲ್ಲವೆಂದು ಪರಿಗಣಿಸಿ ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನರಿ) ನಿಯಮಗಳು 1977ರ ನಿಯಮ 6(1)ರನುಸಾರ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾದರೆನ್ನಲಾದ ದಿನಾಂಕ: 14.07.98ರಿಂದಲೇ ಜಾರಿಗೆ ಬರುವಂತೆ ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಇವರನ್ನು ಸೇವೆಯಿಂದ ತೆಗೆದುಹಾಕಲಾಗಿದೆ.

ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು ಇವರು ದಿನಾಂಕ: 07.07.2003ರ ತಮ್ಮ ಪತ್ರದಲ್ಲಿ ಡಾ: ಶಾರೂಕುದ್ದೀನ್ ಇವರು ದಿನಾಂಕ: 02.11.98 ರಿಂದ 09.12.98 ರವರೆಗೆ ರಜೆಯ ಮೇಲಿದ್ದು ದಿನಾಂಕ: 20.12.98 ರಂದು ಕರ್ತವ್ಯಕ್ಕೆ ಪುನಃವರದಿ ಮಾಡಿಕೊಂಡಿರುತ್ತಾರೆಂದು ಇವರಿಗೆ ವೈದ್ಯಕೀಯ ಅಧೀಕ್ಷಕರು ಕಾರಾವಿ ಆಸ್ಪತ್ರೆ, ಇಂದಿರಾನಗರ ಇವರು ದಿನಾಂಕ: 25.11.98ರ ಅಧಿಕೃತ ಜ್ಞಾಪನ ಪತ್ರದಲ್ಲಿ ಈ ಅವಧಿಗೆ ರಜೆಯನ್ನು ಮಂಜೂರು ಮಾಡಿರುತ್ತಾರೆಂದೂ, ಅಲ್ಲದೇ ಇವರು ದಿನಾಂಕ: 16.08.99 ರಿಂದ 05.10.99ರವರೆಗೆ ರಜೆ ಮಂಜೂರಾತಿಗಾಗಿ ಅರ್ಜಿಯನ್ನು ಸಲ್ಲಿಸಿದ್ದು ರಜೆ ಮಂಜೂರಾತಿಯ ವಿಷಯ ವೈದ್ಯಕೀಯ ಅಧೀಕ್ಷಕರು ಕಾರಾವಿ ಆಸ್ಪತ್ರೆ, ಇಂದಿರಾನಗರ, ಇವರ ಪರಿಶೀಲನೆಯಲ್ಲಿದ್ದುದಾಗಿಯೂ ಆದರೂ ಸಹ ಸದರಿ ಅಧಿಕಾರಿಯನ್ನು ದಿನಾಂಕ:14.07.98 ರಿಂದ ಸೇವೆಯಿಂದ ತೆಗೆದುಹಾಕಿರುವ ಬಗ್ಗೆ ಸ್ಪಷ್ಟೀಕರಿಸುವಂತೆ ಕೋರಿರುತ್ತಾರೆ. ಅಲ್ಲದೆ ಸದರಿ ವೈದ್ಯರು ದಿನಾಂಕ: 14.07.98 ರಿಂದ 31.08.99ರವರೆಗೆ ಪಡೆದಿರುವ ವೇತನದ ಮೊತ್ತ ರೂ.1,38,975-00 ಆಗಿರುವುದರಿಂದ ಇವರನ್ನು ಸೇವೆಯಿಂದ ವಜಾಗೊಳಿಸಲಾದ ಸರಿಯಾದ ದಿನಾಂಕವನ್ನು ತಿಳಿಸುವಂತೆ ಹಾಗೂ ಈ ಹೆಚ್ಚುವರಿ ಮೊತ್ತವನ್ನು ಯಾವ ರೀತಿ ವಸೂಲಿ ಮಾಡಲಾಗುವುದು ಎಂಬ ಬಗ್ಗೆ ಸಹ ಸ್ಪಷ್ಟೀಕರಿಸುವಂತೆ ಕೋರಿರುತ್ತಾರೆ.

ನಿರ್ದೇಶಕರು, ಕಾರಾವಿ ಇವರು ಡಾ: ಶಾರೂಕುದ್ದೀನ್, ವಿಮಾ ವೈದ್ಯಾಧಿಕಾರಿ, ಇವರು ದಿನಾಂಕ: 14.07.98 ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿದ್ದಾರೆಂದು ನೀಡಿದ್ದ ವರದಿಯ ಆಧಾರದ ಮೇಲೆ ಅವರನ್ನು ಸದರಿ ದಿನಾಂಕದಿಂದ ಜಾರಿಗೆ ಬರುವಂತೆ ಸೇವೆಯಿಂದ ತೆಗೆದುಹಾಕಲಾಗಿದ್ದು ಇವರ ಅನಧಿಕೃತ ಗೈರು ಹಾಜರಾತಿಯ ಬಗ್ಗೆ ಸರಿಯಾದ ದಿನಾಂಕವನ್ನು ಸೂಚಿಸದೆ ಇರುವ ಬಗ್ಗೆ ನಿರ್ದೇಶಕರಿಂದ ಸ್ಪಷ್ಟೀಕರಣ ಕೋರಲಾಗಿತ್ತು.

ನಿರ್ದೇಶಕರು ಕಾರಾವಿ ಇವರು ದಿನಾಂಕ: 17.05.2004ರ ತಮ್ಮ ಪತ್ರದಲ್ಲಿ ಡಾ: ಶಾರೂಕುದ್ದೀನ್ ಇವರು ದಿನಾಂಕ:14.07.98ರಿಂದ ದಿನಾಂಕ:18.07.98ರವರೆಗೆ ಸಾಂದರ್ಭಿಕ ರಜೆ ಮತ್ತು 19.07.98 ರಂದು ಪರವಾನಗಿ ರಜೆಯನ್ನು ಪಡೆದಿರುತ್ತಾರೆಂದು ಅನಂತರ ದಿನಾಂಕ:02.11.98 ರಿಂದ 01.12.98ರವರೆಗೆ 30 ದಿನಗಳ ಗಳಿಕೆ ರಜೆ ದಿನಾಂಕ:02.12.98 ರಿಂದ 19.12.98ರವರೆಗೆ ಅರ್ಧವೇತನ ರಜೆ ಸೇರಿ ಒಟ್ಟು 48 ದಿನಗಳ ಸಂಯುಕ್ತ ರಜೆಯನ್ನು ಮಂಜೂರುಗೊಳಿಸಿಕೊಂಡಿರುತ್ತಾರೆಂದು ದಿನಾಂಕ:17.08.99 ರಿಂದ ಗಳಿಕೆ ರಜೆ ಮಂಜೂರಾತಿ ಕೋರಿ ಮನವಿ ಪತ್ರ ಸಲ್ಲಿಸಿದ್ದು ತರುವಾಯ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲವೆಂದು ಆದ್ದರಿಂದ ಈ ಹಿಂದೆ ಸರ್ಕಾರಕ್ಕೆ ಸಲ್ಲಿಸಿದ್ದ ಪ್ರಸ್ತಾವನೆಯಲ್ಲಿ ತಿಳಿಸಲಾಗಿದ್ದ ದಿನಾಂಕ:14.07.98 ಎಂಬುವುದರ ಬದಲಾಗಿ ದಿನಾಂಕ: 17.08.99 ರಿಂದ ಕರ್ತವ್ಯದಿಂದ ಅನಧಿಕೃತವಾಗಿ ಗೈರು ಹಾಜರಾಗಿರುವುದಾಗಿ ಪರಿಗಣಿಸಿ ಸದರಿ ದಿನಾಂಕದಿಂದ ಜಾರಿಗೆ ಬರುವಂತೆ ಸೇವೆಯಿಂದ ತೆಗೆದುಹಾಕಲಾಗಿದೆಯೆಂದು ಮಾರ್ಪಡಿಸಿದ ಸರ್ಕಾರಿ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ. ಅಲ್ಲದೆ ದಿನಾಂಕ:16.08.99 ರಿಂದ 31.08.99ರವರೆಗಿನ ರಜೆಗಳು ಮಂಜೂರಾಗದ ಅವಧಿಗೆ ಪಡೆದಿದ್ದ ವೇತನ ರೂ.5,555-00ಗಳನ್ನು ರಾಜ್ಯ ಹುಜೂರ್ ಖಜಾನೆಗೆ ಚಲನ್ ಸಂ.81, ದಿನಾಂಕ:03.01.2006ರಲ್ಲಿ ಜಮಾ ಮಾಡಲಾಗಿದೆಯೆಂದು ದಿನಾಂಕ: 03.02.2006ರ ತಮ್ಮ ಪತ್ರದಲ್ಲಿ ತಿಳಿಸಿರುತ್ತಾರೆ.

ನಿರ್ದೇಶಕರು, ಕಾರಾವಿ ಇವರು ನೀಡಿರುವ ವಿವರಣೆಯ ಅನುಸಾರ ಡಾ: ಶಾರೂಕುದ್ದೀನ್, ವಿಮಾ ವೈದ್ಯಾಧಿಕಾರಿ, ಇವರನ್ನು ದಿನಾಂಕ: 14.07.98 ರಿಂದ ಜಾರಿಗೆ ಬರುವಂತೆ ಸೇವೆಯಿಂದ ತೆಗೆದುಹಾಕಲಾಗಿದ್ದ ಆದೇಶವನ್ನು ಮಾರ್ಪಡಿಸುವ ಬಗ್ಗೆ ಪರಿಶೀಲಿಸಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 10 ಎಲ್ಎಸ್ಐ 2005, ಬೆಂಗಳೂರು, ದಿನಾಂಕ:25ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಡಾ: ಶಾರೂಕುದ್ದೀನ್, ವಿಮಾ ವೈದ್ಯಾಧಿಕಾರಿ ಇವರು ದಿನಾಂಕ: 17.08.1999 ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುವುದರಿಂದ ಸರ್ಕಾರಿ ಆದೇಶ ಸಂಖ್ಯೆ: ಕಾಇ 185 ಎಲ್ಎಸ್ಐ 2000 ದಿನಾಂಕ: 19.04.2003ರಲ್ಲಿ ಇವರನ್ನು ದಿನಾಂಕ: 14.07.98ರಿಂದ ಜಾರಿಗೆ ಬರುವಂತೆ ಸೇವೆಯಿಂದ ತೆಗೆದುಹಾಕಲಾಗಿದ್ದ ಆದೇಶವನ್ನು ಮಾರ್ಪಡಿಸಿ ದಿನಾಂಕ: 17.08.99 ರಿಂದ ಜಾರಿಗೆ ಬರುವಂತೆ ಇವರನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 6(1) ರನುಸಾರ ಸೇವೆಯಿಂದ ತೆಗೆದುಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ವಿಶ್ವನಾಥ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ (ಕಾರಾವಿ ಯೋ (ವೈ) ಸೇವೆಗಳು).

ಪಿ.ಆರ್. 473

## ENERGY SECRETARIAT

## CORRIGENDUM

**No. DE 40 PSR 2006, Bangalore, Dated: 27th March, 2006**

In the Government Order No. DE 40 PSR 2006 Dated: 10.03.2006, the following paras shall be substituted:

**Para (1)** To arrange payment of fees 1-00 Crore during 2005-06 towards Consultancy services obtained in the period of contract through M/s CMS Cameron McKenna, U.K. Consortium-Financial Distribution Privatization (FDP) Consultants only.

**Para (3)** The expenditure on this account is to be met out of the budget provision of Rs.1.00 corores made for the year 2005-06 under the head of account 2801-80-101-1-80 (Plan) TA Loan for Power Sector Reforms. The amount provided in the budget will be fully utilized for the FY 2005-06.

All other terms and conditions of the GO No.DE 40 PSR 2006 Dated: 10.03.2006 remain unchanged.

By Order and in the Name of the Governor of Karnataka,

**SURESH B. KRISHNAPPANAVAR**

PR-476

Under Secretary to Government,
Energy Department.

## INFRASTRUCTURE DEVELOPMENT SECRETARIAT

**Sub:** Release of funds to KSIIDC towards Equity Share Capital of Bangalore International Airport Ltd.

**Read:** 1. G.O. No. IDD 14 DIA 2002, Dated: 08.07.2004.
2. G.O. No. IDD 41 DIA 2005 Dated: 22.09.2005.
3. G.O. No. IDD 41 DIA 2005 Dated: 03.01.2006.
4. Letter No. AGM (BIAP)/ 4391/ 2005-06 dated 15.03.2006 from the MD, KSIIDC.

**Preamble:**

In Government Order Dated: 08.07.2005 read at Sl.No. 1 above, Government had released an amount of Rs.5.00 Crores to KSIIDC towards equity share capital in Bangalore International Airport Ltd.

2. In Government Order Dated: 22.09.2005 read at Sl.No.2, above, Government had released an amount of Rs.2.20 crores to KSIIDC towards equity share capital out of the provision of Rs.10.86 crores allocated during the current year.

3. In Government Order Dated: 03.01.2006 read at Sl.No.3 above, the Government had released an amount of Rs.2.04 crores to KSIIDC towards equity share capital in Bangalore International Airport Ltd., out of the remaining budget provision of Rs.6.62 crores allocated during the current year.

4. The Managing Director, KSIIDC in his letter Dated: 15.03.2006 read at Sl.No.4 above, has requested the Government to release Rs.3.79 crores being the 4th draw down equity, based on the construction budget of Bangalore International Airport Limited of Rs.118.97 crores for the quarter April-June 2006.

**Government Order No. IDD 41 DIA 2005 (P), Bangalore, Dated: 27th March, 2006**

After careful examination of the above proposal, Government are pleased to release a sum of Rs.3.79 crores (Rupees Three crores and Seventy Nine Lakhs) only towards the 4th draw down equity share capital contribution of GoK in Bangalore International Airport Limited to the KSIIDC out of the remaining Rs.6.62 crores allocated during the year 2005-06 under the Head of Account "5465-01-190-2-01-211-KSIIDC Investments (Plan)".

2. The Managing Director, KSIIDC is authorized to draw the amount on a payee's receipt counteresigned by the Under Secretary to Government, Infrastructure Development Department.

3. This order issues with the concurrence of Finance Department vide its U.O. Note No.FD 550 Expl/06 Dated: 27.03.2006. This release is exempted form the presentation of bill after the cut-off date.

By Order and in the Name of the Governor of Karnataka,

**T.B. RENUKAPRASAD**

PR-477

Under Secretary to Government,
Infrastructure Development Department.

## ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

**ವಿಷಯ:** ಶ್ರೀ ಡಿಸೋಜ ರಾಬಿನ್‌ಸನ್, ನಿವೃತ್ತ, ಕಾರ್ಯದರ್ಶಿಯವರು, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ ಇವರನ್ನು ವಿಧಾನ ಮಂಡಲದ ಪ್ರಧಾನ ಕಾರ್ಯದರ್ಶಿಯಾಗಿ ಒಪ್ಪಂದದ ಆಧಾರದ ಮೇಲಿನ ನೇಮಕಾತಿಯ ಷರತ್ತು ಹಾಗೂ ನಿಬಂಧನೆಗಳು.

**ಓದಲಾಗಿದೆ:** 1. ಕರ್ನಾಟಕ ವಿಧಾನ ಪರಿಷತ್ತಿನ ಆದೇಶ ಸಂಖ್ಯೆ: ವಿಪಸ:ಆ-1:76: ಪ್ರಕಾಸ್ಯ:05, ದಿನಾಂಕ: 20ನೇ ಅಕ್ಟೋಬರ್, 2005.
2. ಅಧಿಸೂಚನೆ ಸಂಖ್ಯೆ: ಕೆಎಲ್‌ಸಿ:ಸಿಓ:363:05, ದಿನಾಂಕ:16.01.2006.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಕ್ರಮಸಂಖ್ಯೆ:(1)ರಲ್ಲಿನ ಆದೇಶದಲ್ಲಿ ರಾಜ್ಯ ವಿಧಾನ ಮಂಡಲದ ಉಭಯ ಸದನಗಳ ವಿಶೇಷ ಮಂಡಳಿಯ ದಿನಾಂಕ:23.09.2005ರ ಸಭೆಯಲ್ಲಿ ತೀರ್ಮಾನಿಸಿದಂತೆ ವಿಧಾನ ಮಂಡಲದ ಎರಡು ಸಚಿವಾಲಯಗಳಿಗೂ ಸೇರಿದಂತೆ ಸಾಮಾನ್ಯ ಪದವೃಂದದ ಪ್ರಧಾನ ಕಾರ್ಯದರ್ಶಿ ಹುದ್ದೆಯೊಂದನ್ನು ಸೃಜಿಸಿದ್ದು, ಕ್ರಮಸಂಖ್ಯೆ: (ii)ರಲ್ಲಿ ಸೂಚಿಸಿರುವ ಅಧಿಸೂಚನೆಯಲ್ಲಿ ಶ್ರೀ ಡಿಸೋಜ ರಾಬಿನ್‌ಸನ್, ಸರ್ಕಾರದ ಕಾರ್ಯದರ್ಶಿ, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ ಇವರನ್ನು ಪ್ರಧಾನ ಕಾರ್ಯದರ್ಶಿಯನ್ನಾಗಿ ಕರ್ನಾಟಕ ವಿಧಾನ ಮಂಡಲದ ವಿಶೇಷ ಮಂಡಳಿಯು 3 ವರ್ಷಗಳ ಅವಧಿಗೆ ಅಥವಾ ಸದರಿಯವರು ಗರಿಷ್ಠ 60 ವರ್ಷಗಳ ವಯೋಮಿತಿ ತಲುಪುವವರೆಗೆ ಜಾರಿಗೆ ಬರುವಂತೆ ನೇಮಕ ಮಾಡಿರುತ್ತದೆ. ಸದರಿ ಅಧಿಕಾರಿಯವರು ಕಾನೂನು ಇಲಾಖೆಯಲ್ಲಿ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದು ತಮ್ಮ ಈ ಹುದ್ದೆಯಿಂದ ಸ್ವಯಂ ನಿವೃತ್ತಿ ಪಡೆದು ಹೊಸ ಹುದ್ದೆಗೆ ಹಾಜರಾಗುವುದಾಗಿಯೂ ಮತ್ತು ಪ್ರಧಾನ ಕಾರ್ಯದರ್ಶಿ ಹುದ್ದೆಯು ವೇತನ ರಹಿತ ಹುದ್ದೆಯಾಗಿದ್ದು, ಆ ಹುದ್ದೆಯಲ್ಲಿ ಶ್ರೀ ಡಿಸೋಜ ರಾಬಿನ್‌ಸನ್ ಅವರನ್ನು ಒಪ್ಪಂದದ ಆಧಾರದ ಮೇಲೆ ನೇಮಕ ಮಾಡಿ ಸಂಚಿತ ವೇತನವನ್ನು ನೀಡುವ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಗೆ ಕಳುಹಿಸಿಕೊಡಲಾಗಿತ್ತು. ಆರ್ಥಿಕ ಇಲಾಖೆಯು ಈ ಪ್ರಸ್ತಾವನೆಗೆ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ/154/ ಸೇವೆ-4/ 06, ದಿನಾಂಕ:03.03.2006ರಲ್ಲಿ ಸಹಮತಿಯನ್ನು ಸೂಚಿಸಿದೆ.

ಆದುದರಿಂದ, ಸದರಿ ಅಧಿಕಾರಿಯವರ ಒಪ್ಪಂದದ ಆಧಾರದ ಮೇಲಿನ ನೇಮಕಾತಿಯ ಷರತ್ತು ಹಾಗೂ ನಿಬಂಧನೆಗಳನ್ನು ನಿಗದಿಪಡಿಸುವ ಅಗತ್ಯತೆಯನ್ನು ಮನಗಂಡು ಈ ಕೆಳಕಂಡಂತೆ ಆದೇಶಿಸಲಾಗಿರುತ್ತದೆ.

### ಆದೇಶ ಸಂಖ್ಯೆ:ಕವಿಪಸ:ಆ-1:03: ಗುವೇ:06, ಬೆಂಗಳೂರು, ದಿನಾಂಕ:24ನೇ ಮಾರ್ಚ್, 2006

ಶ್ರೀ ಡಿಸೋಜ ರಾಬಿನ್‌ಸನ್, ಇವರು ಕಾನೂನು, ನ್ಯಾಯ ಮತ್ತು ಮಾವನ ಹಕ್ಕುಗಳ ಇಲಾಖೆಯ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸಿ ಈ ಹುದ್ದೆಯಿಂದ ಸ್ವಯಂ ನಿವೃತ್ತಿ ಪಡೆದು ವಿಧಾನ ಮಂಡಲದ ಎರಡು ಸಚಿವಾಲಯಗಳಿಗೂ ಸೇರಿದಂತೆ ಸಾಮಾನ್ಯ ಪದವೃಂದದ ಪ್ರಧಾನ ಕಾರ್ಯದರ್ಶಿ ಹುದ್ದೆಗೆ ಹಾಜರಾಗಿರುವ ಹಿನ್ನೆಲೆಯಲ್ಲಿ ಇವರ ಒಪ್ಪಂದದ ಆಧಾರದ ಮೇಲಿನ ನೇಮಕಾತಿ ಷರತ್ತು ಮತ್ತು ನಿಬಂಧನೆಗಳನ್ನು ಈ ಕೆಳಕಂಡಂತೆ ನಿಗದಿಪಡಿಸಲಾಗಿದೆ.

1. ಶ್ರೀ ಡಿಸೋಜ ರಾಬಿನ್‌ಸನ್, ನಿವೃತ್ತ ಕಾರ್ಯದರ್ಶಿ, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ ಪ್ರಸ್ತುತ ಪ್ರಧಾನ ಕಾರ್ಯದರ್ಶಿ ಕರ್ನಾಟಕ ವಿಧಾನ ಮಂಡಲ ಇವರ ಒಪ್ಪಂದದ ಆಧಾರ ಮೇಲಿನ ನೇಮಕಾತಿ ಅವಧಿಯು ದಿನಾಂಕ: 09.03.2006 ರಿಂದ 02.01.2009ರವರೆಗೆ ಮಾತ್ರ ಇರುತ್ತದೆ.
2. ಶ್ರೀ ಡಿಸೋಜ ರಾಬಿನ್‌ಸನ್, ನಿವೃತ್ತ, ಕಾರ್ಯದರ್ಶಿ, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ, ಪ್ರಸ್ತುತ ಪ್ರಧಾನ ಕಾರ್ಯದರ್ಶಿ, ಕರ್ನಾಟಕ ವಿಧಾನ ಮಂಡಲ ಇವರು ಪಡೆಯುತ್ತಿರುವ ನಿವೃತ್ತಿ ವೇತನದೊಂದಿಗೆ ಕರ್ನಾಟಕ ನಾಗರೀಕ ಸೇವಾ ನಿಯಮ 313(ಬಿಬಿ) ಅನ್ವಯ ಆರ್ಥಿಕ ಇಲಾಖೆಯು ನಿಗದಿಪಡಿಸಿರುವ ರೂ.29,000-00 (ಇಪ್ಪತ್ತೊಂಬತ್ತು ಸಾವಿರ ರೂಪಾಯಿಗಳು ಮಾತ್ರ) ಗಳ ಸಂಚಿತ ವೇತನವನ್ನು ಪಡೆಯಲು ಅರ್ಹರಾಗಿರುತ್ತಾರೆ. ಈ ಸಂಚಿತ ವೇತನದೊಂದಿಗೆ ಶ್ರೀಯುತರು ನಿವೃತ್ತಿ ವೇತನ ಮತ್ತು ನಿವೃತ್ತಿ ವೇತನದ ಮೇಲೆ ಕಾಲ ಕಾಲಕ್ಕೆ ಲಭ್ಯವಿರುವ ತುಟ್ಟಿ ಭತ್ಯೆಯನ್ನು ಸಹ ಪಡೆಯಲು ಅರ್ಹರಿರುತ್ತಾರೆ. ಸದರಿ ಅಧಿಕಾರಿಯವರ ವೇತನವನ್ನು "2011-02-103-2-01 ವಿಧಾನ ಪರಿಷತ್ 002-ಅಧಿಕಾರಿಗಳ ವೇತನ" ಲೆಕ್ಕಶೀರ್ಷಿಕೆಯಲ್ಲಿ ಭರಿಸುವುದು.
3. ಕರ್ನಾಟಕ ರಾಜ್ಯ 5ನೇ ವೇತನ ಆಯೋಗವು ಅಸ್ಥಿತ್ವಕ್ಕೆ ಬಂದಿದ್ದು ಸದರಿ ಆಯೋಗವು ರಾಜ್ಯ ಸರ್ಕಾರಿ ನೌಕರರ ವೇತನ ಪರಿಷ್ಕರಣೆಯ ಶಿಫಾರಸ್ಸನ್ನು ಮಾಡಿ ಸರ್ಕಾರವು ಅದನ್ನು ಅನುಷ್ಠಾನಕ್ಕೆ ತಂದಲ್ಲಿ ಅದರಿಂದ ಲಭ್ಯವಾಗುವ ಸೌಲಭ್ಯಗಳನ್ನು ಗಮನದಲ್ಲಿರಿಸಿಕೊಂಡು ಈಗ ಆರ್ಥಿಕ ಇಲಾಖೆ ನಿಗದಿಪಡಿಸಿರುವ ರೂ.29,000/- (ಇಪ್ಪತ್ತೊಂಬತ್ತು ಸಾವಿರ ರೂಪಾಯಿಗಳು ಮಾತ್ರ)ಗಳ ಸಂಚಿತ ವೇತನವನ್ನು ಸೂಕ್ತ ಮಾರ್ಪಾಡು ಮಾಡಿ ಈಗ ನಿಗದಿಪಡಿಸಿರುವ ಸಂಚಿತ ವೇತನವನ್ನು ಪುನರ್ ನಿಗದಿಪಡಿಸಲಾಗುವುದು. ಈ ಪುನರ್ ನಿಗದಿತ ವೇತನವನ್ನು ಶ್ರೀಯುತರು ಪ್ರಧಾನ ಕಾರ್ಯದರ್ಶಿಯಾಗಿ ಕಾರ್ಯವಹಿಸಿಕೊಂಡ ದಿನದಿಂದ ಅಥವಾ ನೌಕರರ ಪರಿಷ್ಕೃತ ವೇತನ ಜಾರಿಗೊಳಿಸಲಾದ ದಿನದಿಂದ ಇವರೆಡರಲ್ಲಿ ಯಾವುದು ನಂತರವೋ ಆ ದಿನದಿಂದ ಮಾಡಲಾಗುವುದು.
4. ಪ್ರಧಾನ ಕಾರ್ಯದರ್ಶಿಯವರು ವಿಧಾನ ಪರಿಷತ್ತಿನ ಮಾನ್ಯ ಸಭಾಪತಿಗಳು ಹಾಗೂ ವಿಧಾನ ಸಭೆಯ ಮಾನ್ಯ ಸಭಾಧ್ಯಕ್ಷರು ಕಾಲಕಾಲಕ್ಕೆ ಸೂಕ್ತ ಆದೇಶದ ಮೂಲಕ ನಿರ್ದಿಷ್ಟಪಡಿಸಬಹುದಾದಂತಹ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂತಹ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.
5. ಪ್ರಧಾನ ಕಾರ್ಯದರ್ಶಿಯವರು ವಿಧಾನ ಮಂಡಲದಲ್ಲಿ ಅವರಿಗೆ ವಹಿಸಲಾದ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು ಹಾಗೂ ಇತರೆ ಇಲಾಖೆ ಅಥವಾ ಸಂಸ್ಥೆಯ ಯಾವುದೇ ಕೆಲಸಗಳನ್ನು ಸಮ್ಮತಿಸುವುದಾಗಲಿ ಅಥವಾ ನೆರವೇರಿಸುವುದಾಗಲಿ ಮಾಡತಕ್ಕದ್ದಲ್ಲ.
6. ಪ್ರಧಾನ ಕಾರ್ಯದರ್ಶಿಯವರು ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಯಾಣ ಮಾಡಬೇಕಾದಲ್ಲಿ ಅವರಿಗೆ ರಾಜ್ಯ ಸರ್ಕಾರದ ಅತ್ಯುನ್ನತ ಶ್ರೇಣಿಯಲ್ಲಿನ ಗರಿಷ್ಠ ವೇತನಕ್ಕೆ ನಿಯಮಾನುಸಾರ ಲಭ್ಯವಿರುವ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.
7. ಪ್ರಧಾನ ಕಾರ್ಯದರ್ಶಿಯವರಿಗೆ ವಾರ್ಷಿಕ 15 ದಿನಗಳ ಸಾಂದರ್ಭಿಕ ರಜೆ ಮತ್ತು 2 ದಿನಗಳ ನಿರ್ಬಂದಿತ ರಜೆ ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮ 150ರ ಅನ್ವಯ ಗಳಿಕೆ ರಜೆ ಪಡೆಯಲು ಹಾಗೂ ನಿಯಮಾನುಸಾರ ಗಳಿಕೆ ರಜೆಯ ನಗದೀಕರಣಕ್ಕೂ ಅರ್ಹರಾಗಿರುತ್ತಾರೆ.
8. ಒಪ್ಪಂದದ ಷರತ್ತು ಮತ್ತು ನಿಬಂಧನೆಗಳಲ್ಲಿ ನೀಡಿರುವ ಸೌಲಭ್ಯಗಳಲ್ಲದೆ ಕರ್ನಾಟಕ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ ಲಭ್ಯವಿರುವ ಇತರೆ ಸೌಲಭ್ಯಗಳಿಗೂ ಇವರು ಅರ್ಹರಿರುತ್ತಾರೆ. ಆದರೆ ವೇತನ ಬಡ್ತಿ, ಪದೋನ್ನತಿ, ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಸದರಿಯವರು ಅರ್ಹರಾಗಿರುವುದಿಲ್ಲ.

9. ಅವರ ದುರ್ನಡತೆಯಿಂದಾಗಲೀ ಅಥವಾ ನಿರ್ಲಕ್ಷತೆ, ಉದಾಸೀನತೆಯಿಂದಾಗಲೀ ಸರ್ಕಾರಕ್ಕೆ ಸಂಬಂಧಿಸಿದಂತೆ ಉಂಟಾದ ಆರ್ಥಿಕ ನಷ್ಟವನ್ನು ಅವರು ಸರ್ಕಾರಕ್ಕೆ ತುಂಬಿಕೊಡಲು ಹೊಣೆಯಾಗಿರುತ್ತಾರೆ.
10. ಸದರಿ ಮರುನೇಮಕಾತಿ ಅವಧಿಯ ಸೇವೆಯನ್ನು ನಿವೃತ್ತಿ ವೇತನ ಹಾಗೂ ಇತ್ಯಾದಿ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವುದಿಲ್ಲ.
11. ಅವರು ಕರ್ತವ್ಯ, ಕಾರ್ಯ ಮತ್ತು ಪ್ರಕಾರ್ಯಗಳನ್ನು ಶ್ರದ್ಧೆ, ಭಕ್ತಿ ಮತ್ತು ಆಸಕ್ತಿಯಿಂದ ನೆರವೇರಿಸುವುದು.
12. ಅವರು ಕರ್ತವ್ಯವನ್ನು ಪಾಲಿಸುತ್ತಿರುವಾಗ ಅಥವಾ ನೆರವೇರಿಸುತ್ತಿರುವಾಗ ಅವರಿಗೆ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಯನ್ನು ಗೌಪ್ಯವಾಗಿಟ್ಟು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.
13. 1966ರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ ಮತ್ತು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗೆ ಅವರು ಬದ್ಧರಾಗಿರುತ್ತಾರೆ.
14. ಈ ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದ್ದಲ್ಲಿ ಗುತ್ತಿಗೆ ನೇಮಕಾತಿಯು ತಾನಾಗಿಯೇ ಮುಕ್ತಾಯವಾಗುತ್ತದೆ.
15. ಈ ಆದೇಶವನ್ನು ಸ್ವೀಕರಿಸಿದ 7 ದಿನಗಳ ಒಳಗಾಗಿ ಐವತ್ತು (ರೂ.50/-) ರೂಪಾಯಿ ಮೌಲ್ಯಗಳ ಛಾಪಾ ಕಾಗದದಲ್ಲಿ ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಸದರಿ ಅಧಿಕಾರಿಯವರಿಂದ ಬರೆಸಿಕೊಳ್ಳತಕ್ಕದ್ದು.

ವಿಧಾನ ಮಂಡಲದ ಸಭಾಪತಿಗಳು ಹಾಗೂ ಸಭಾಧ್ಯಕ್ಷರ
ಆದೇಶಾನುಸಾರ ಮತ್ತು ಅವರುಗಳ ಜಂಟಿ ಹೆಸರಿನಲ್ಲಿ,

ಪಿ.ಆರ್. 485

**ಸೋಮನಾಯಕ್**
ಅಧೀನ ಕಾರ್ಯದರ್ಶಿ,
ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ.

## ಕಾರ್ಮಿಕ ಸಚಿವಾಲಯ

**ವಿಷಯ:** ಉದ್ಯೋಗ ಮತ್ತು ತರಬೇತಿ ಇಲಾಖೆಯ, ಉದ್ಯೋಗ ವಿಭಾಗದ ನೌಕರರಿಗೆ ವಿಶೇಷ ಸ್ವಯಂ ನಿವೃತ್ತಿ ಯೋಜನೆಯಡಿ ನಿವೃತ್ತಿ ಹೊಂದಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 15 ಸೇಇವಿ 2003, ದಿನಾಂಕ: 01.09.2003.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 15 ಸೇಇವಿ 2003, ದಿನಾಂಕ:17.05.2004.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಸೇಇವಿ 2004 (ಭಾಗ), ದಿನಾಂಕ: 27.05.2005.
4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಎಸ್.ಡಿ.ಇ. 2004, ದಿನಾಂಕ: 24.12.2005.
5. ಉಪ ನಿರ್ದೇಶಕರು, ಉತನಿ/ ಉದ್ಯೋಗ/ ಆಡಳಿತ-1ಎ/ ವಿವ-27/ 2004-05.

**ಪ್ರಸ್ತಾವನೆ:**

ರಾಜ್ಯ ಸರ್ಕಾರದ ನೌಕರರಿಗೆ ವಿಶೇಷ ಸ್ವಯಂ ನಿವೃತ್ತಿ ಯೋಜನೆಯನ್ನು ಮೇಲೆ ಓದಲಾದ (1)ರ ಆದೇಶದಲ್ಲಿ ಪ್ರಕಟಿಸಲಾಗಿದ್ದು ನಂತರ (2)ರ ಆದೇಶದಲ್ಲಿ ಸದರಿ ಆದೇಶಕ್ಕೆ ಕೆಲವು ಮಾರ್ಪಾಡುಗಳನ್ನು ತರಲಾಗಿದೆ. ಮೇಲೆ ಓದಲಾದ (4)ರ ಆದೇಶದಲ್ಲಿ ಈ ಸೌಲಭ್ಯವನ್ನು ದಿನಾಂಕ: 31.03.2006ರವರೆಗೆ ವಿಸ್ತರಿಸಲಾಗಿದೆ. ಈ ಹಿನ್ನೆಲೆಯಲ್ಲಿ ಉದ್ಯೋಗ ಮತ್ತು ತರಬೇತಿ ಇಲಾಖೆಯ, ಉದ್ಯೋಗ ವಿಭಾಗದ ಗ್ರೂಪ್-ಸಿ ನೌಕರರಿಗೆ ವಿಶೇಷ ಸ್ವಯಂ ನಿವೃತ್ತಿ ಯೋಜನೆಯ ಸೌಲಭ್ಯ ನೀಡುವ ಕುರಿತಂತೆ ಉದ್ಯೋಗ ಮತ್ತು ತರಬೇತಿ ಇಲಾಖೆಯ ಉಪನಿರ್ದೇಶಕರು ಮೇಲೆ ಓದಲಾದ (5)ರ ಪತ್ರದಲ್ಲಿ ಇಲಾಖೆಯ 3 ಮಂದಿ ನೌಕರರುಗಳಿಗೆ ವಿಶೇಷ ಸ್ವಇಚ್ಛಾ ನಿವೃತ್ತಿ ಹೊಂದಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 14 ಇಟಿಎಕ್ಸ್ 2006, ಬೆಂಗಳೂರು, ದಿನಾಂಕ:31ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಈ ಕೆಳಗೆ ನಮೂದಿಸಲಾದ ಉದ್ಯೋಗ ಮತ್ತು ತರಬೇತಿ ಇಲಾಖೆಯ, ಉದ್ಯೋಗ ವಿಭಾಗದ ಒಟ್ಟು 3 ಜನ ಗ್ರೂಪ್-ಸಿ ನೌಕರರಿಗೆ ಮೇಲೆ ಓದಲಾದ ಸರ್ಕಾರಿ ಆದೇಶ ದಿನಾಂಕ: 01.09.2003, 17.05.2004, 27.05.2005 ಮತ್ತು 24.12.2005ರಲ್ಲಿ ನಮೂದಿಸಿರುವ ಷರತ್ತುಗಳಿಗೊಳಪಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ವಿಶೇಷ ಸ್ವಯಂ ನಿವೃತ್ತಿ ಯೋಜನೆ ಅಡಿ ನಿವೃತ್ತಿ ಹೊಂದಲು ಅನುಮತಿ ನೀಡಲಾಗಿದೆ ಹಾಗೂ ಅವರು ನಿವೃತ್ತಿ ಆದ ದಿನಾಂಕದಿಂದ ಸದರಿ ನೌಕರರು ಹೊಂದಿದ್ದ ಹುದ್ದೆಗಳನ್ನು ರದ್ದುಗೊಳಿಸಲಾಗಿದೆ.

| ಕ್ರಮ ಸಂಖ್ಯೆ | ಹೆಸರು/ ಪದನಾಮ |
|---|---|
| 1. | ಶ್ರೀ ಬಿ.ಎನ್. ಲಕ್ಷ್ಮೀಕಾಂತ್,<br>ದ್ವಿತೀಯ ದರ್ಜೆ ಸಹಾಯಕ (ಗ್ರೂಪ್-ಸಿ) |
| 2. | ಶ್ರೀ ಸಯ್ಯದ್ ಅಹಮ್ಮದ್,<br>ದ್ವಿತೀಯ ದರ್ಜೆ ಸಹಾಯಕ (ಗ್ರೂಪ್-ಸಿ) |
| 3. | ಶ್ರೀ ಮೋಹನ್,<br>ದ್ವಿತೀಯ ದರ್ಜೆ ಸಹಾಯಕ (ಗ್ರೂಪ್-ಸಿ) |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಟಿ. ಶ್ರೀನಿವಾಸನ್**

ಪಿ.ಆರ್. 486

ಪೀಠಾಧಿಕಾರಿ,
ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ)

**ವಿಷಯ:** ಸೆಂಟರ್ ಆಫ್ ಎಕ್ಸಲೆನ್ಸ್ ಕಾರ್ಯಕ್ರಮದಡಿ ರಾಜ್ಯದ 6 ಕೈಗಾರಿಕಾ ತರಬೇತಿ ಸಂಸ್ಥೆಗಳಿಗೆ ಡಿ.ಜಿ.ಎಸ್. ಅಂಡ್ ಡಿ ದರ ಕರಾರು ಅಡಿಯಲ್ಲಿ ಕಂಪ್ಯೂಟರ್ ಉಪಕರಣಗಳ ಖರೀದಿ ಬಗ್ಗೆ.

**ಓದಲಾಗಿದೆ:** 1. ನಿರ್ದೇಶಕರ ಪತ್ರ ಸಂಖ್ಯೆ: ಉತಇ/ ತ/ ಖರೀದಿ-4/ ಸಿ.ಓ.ಇ./ ವಿವ-7/ 2005-06, ದಿನಾಂಕ: 02.03.2006.

2. ಸರ್ಕಾರದ ಆದೇಶ ಸಂಖ್ಯೆ: ಕಾಇ 140 ಇಟಿಐ 2004(ಪಿ), ದಿನಾಂಕ:29.03.2006.

**ಪ್ರಸ್ತಾವನೆ:**

ರಾಜ್ಯದ 6 ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಉನ್ನತೀಕರಣಗೊಳಿಸುವ ಬಗ್ಗೆ 2005-2006ನೇ ಸಾಲಿನಲ್ಲಿ ಪೂರಕ ಅಂದಾಜಿನಲ್ಲಿ ರೂ.100 ಲಕ್ಷಗಳ ಅನುದಾನ ನಿಗದಿಪಡಿಸಲಾಗಿದ್ದು, ಇದಕ್ಕೆ ಸಂಬಂಧಿಸಿದಂತೆ ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರು ದಿನಾಂಕ: 02.03.2006 ರಂದು ಸರ್ಕಾರಕ್ಕೆ ಬರೆದ ಪತ್ರದಲ್ಲಿ ಈ ಕೆಳಕಂಡ ಪ್ರಸ್ತಾವನೆ ಬಗ್ಗೆ ಸರ್ಕಾರದ ಅನುಮತಿ ನೀಡಲು ಕೋರಿರುತ್ತಾರೆ.

1) ಗಣಕ ಯಂತ್ರ ಹಾಗೂ ಅದಕ್ಕೆ ಸಂಬಂಧಪಟ್ಟ ಉಪಕರಣಗಳನ್ನು ಖರೀದಿಸಲು ರೂ.22,38,535 ಲಕ್ಷಗಳಿಗೆ ಅನುಮತಿ.

2) ಡಿ.ಎಸ್.ಎಂ.ಎಸ್. ಸಂಸ್ಥೆ ಯಿಂದ ದರಕರಾರು ಆಧಾರದ ಮೇಲೆ ಪೀಠೋಪಕರಣಗಳನ್ನು ರೂ.12,72,708 ಲಕ್ಷಗಳಿಗೆ ಖರೀದಿಸಲು ಅನುಮತಿ.

3) ಅಲ್ಪಾವಧಿ ಟೆಂಡರ್‌ಗಳನ್ನು ಕರೆದು ಖರೀದಿಸಲು ರೂ.64,88,757 ಲಕ್ಷ ಅನುದಾನವನ್ನು KTPP Actನ ಅನ್ವಯ ನಿಯಮಾನುಸಾರ ಎಲೆಕ್ಟ್ರಿಕಲ್ ಸೆಕ್ಟರ್‌ನ ಯಂತ್ರೋಪಕರಣಗಳನ್ನು ಖರೀದಿಸಲು ಅನುಮತಿ.

ಏತನ್ಮಧ್ಯೆ, ಭಾರತ ಸರ್ಕಾರ ಈ ಪ್ರಕರಣಕ್ಕೆ ಸಂಬಂಧಿಸಿದಂತೆ, ರೂ.17.16 ಲಕ್ಷಗಳನ್ನು ಬಿಡುಗಡೆ ಮಾಡಿರುವುದರಿಂದ ಹಾಗೂ ಇದಕ್ಕೆ ಸಂಬಂಧಿಸಿದಂತೆ Credit Slipನ್ನು ಹೊರಡಿಸಿರುವುದರಿಂದ ಸರ್ಕಾರಿ ಆದೇಶ ಸಂಖ್ಯೆ: ಕಾಇ 140 ಇಟಿಐ 2004 (ಪಿ), ದಿನಾಂಕ: 29.03.2006ರ ಆದೇಶದಲ್ಲಿ ಗಣಕ ಯಂತ್ರದ ಉಪಕರಣ ಖರೀದಿಸಲು ರೂ.22,11,113/-ಗಳಿಗೆ ಸರ್ಕಾರದ ಮಂಜೂರಾತಿ ನೀಡಲಾಗಿದೆ. ಈ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 140 ಇಟಿಐ (ಭಾಗ), ಬೆಂಗಳೂರು, ದಿನಾಂಕ:31ನೇ ಮಾರ್ಚ್, 2006**

ಮೇಲೆ ವಿವರಿಸಿದ ಕಾರಣಗಳಿಂದ, Centres of Excellence ಕಾರ್ಯಕ್ರಮದ ಅನುಷ್ಠಾನದಡಿಯಲ್ಲಿ ರಾಜ್ಯದ 6 ಕೈಗಾರಿಕಾ ತರಬೇತಿ ಸಂಸ್ಥೆಗಳಿಗೆ ಗಣಕ ಯಂತ್ರ ಮತ್ತು ಗಣಕ ಯಂತ್ರದ ಪೀಠೋಪಕರಣಗಳನ್ನು ಖರೀದಿಸಲು KTTP Act ಪ್ರಕಾರ ಹಾಗೂ TAP clearance ಪಡೆದು, ಖರೀದಿಸಲು ರೂ.77,88,887 (100,00,000- 22,11,113) ಗಳಿಗೆ ಸರ್ಕಾರದ ಮಂಜೂರಾತಿ ನೀಡಲಾಗಿದೆ. ಕಂಪ್ಯೂಟರ್, ಇತ್ಯಾದಿಗಳನ್ನು ಡಿ.ಎಸ್.ಎಂ.ಎಸ್. ನಿಂದ ಖರೀದಿಸಬಾರದು. ಇದರ ಬಗ್ಗೆ ಕೇಂದ್ರ ಪುರಸ್ಕೃತ ಯೋಜನೆಯಡಿಯಲ್ಲಿ ನೀಡಿರುವ ಮಾರ್ಗಸೂಚಿಯನ್ನು ಅನುಸರಿಸತಕ್ಕದ್ದು. KTTP Act ಅಡಿಯಲ್ಲಿ DGS & D rate contract ಪ್ರಕಾರ ಖರೀದಿಸಲು ಅವಕಾಶ ಕಲ್ಪಿಸಿರುವುದರಿಂದ, ಈ ಪ್ರಕರಣದಲ್ಲಿ ಆ ಅವಕಾಶವನ್ನು ಉಪಯೋಗಿಸಿಕೊಳ್ಳತಕ್ಕದ್ದು.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 2230-30-101-0-26-125(ಪಿ) ಆಧುನೀಕರಣ ಅಡಿಯಲ್ಲಿ ಈ ವೆಚ್ಚವನ್ನು ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD 156 Exp-9 2006, date:29.03.2006 ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಟಿ. ಶ್ರೀನಿವಾಸನ್**

ಪೀಠಾಧಿಕಾರಿ,

ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ)

ಪಿ.ಆರ್. 487

**ವಿಷಯ:** ಕಾರ್ಮಿಕ ಭವನದ 3ನೇ ಹಂತದ ನಿರ್ಮಾಣದ ಸಲುವಾಗಿ ಅನುದಾನ ಒದಗಿಸುವ ಬಗ್ಗೆ ಆದೇಶ.

**ಓದಲಾಗಿದೆ:** 1. ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಉತಇ/ ತರಬೇತಿ/ ಕಟ್ಟಡ/ ಸಿಆರ್-13/ 1996-97 ದಿನಾಂಕ: 01.03.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಇಲಾಖೆ, ಇವರು ಕಾರ್ಮಿಕ ಭವನದ 3ನೇ ಹಂತದ ಕಾಮಗಾರಿಗಳಿಗಾಗಿ ರೂ.389.25 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಪ್ರಸ್ತಾಪಿಸುತ್ತಾ, ಸದರಿ ಕಾಮಗಾರಿಯ ನಿರ್ಮಾಣ ವೆಚ್ಚವು ರೂ.350.00 ಲಕ್ಷಗಳಿಂದ 402/- ಲಕ್ಷಗಳಿಗೆ ಏರಿಕೆಯಾಗಿದ್ದು, ಸರ್ಕಾರವು ರೂ.46.28 ಲಕ್ಷಗಳನ್ನು ಮಾತ್ರ ಒದಗಿಸಿರುತ್ತದೆ. ಸದರಿ ಕಾಮಗಾರಿಯನ್ನು ಪೂರ್ಣಗೊಳಿಸಲು ಸದ್ಯಕ್ಕೆ ರೂ.355.72 ಲಕ್ಷಗಳನ್ನು ಬಿಡುಗಡೆ ಮಾಡಿದ್ದಲ್ಲಿ ಕೆಲವೇ ತಿಂಗಳುಗಳಲ್ಲಿ ಕಟ್ಟಡವನ್ನು ಪೂರ್ಣವಾಗಿ ಮುಗಿಸಿ ಹಸ್ತಾಂತರಿಸಲಾಗುವುದೆಂದು ವರದಿ ಮಾಡಿರುತ್ತಾರೆ. ಹಾಗೂ ಜರೂರು ರೂ.355.72 ಲಕ್ಷಗಳನ್ನು ಒದಗಿಸಿದಲ್ಲಿ ಈ ಇಲಾಖೆ ಬಾಡಿಗೆ ಕಟ್ಟಡದಲ್ಲಿ ಕಾರ್ಯ ನಿರ್ವಹಿಸುತ್ತಿರುವುದರಿಂದ ವಾರ್ಷಿಕ ರೂ.28,46,688/- ಗಳು ಬಾಡಿಗೆಯ ರೂಪದಲ್ಲಿ ಸರ್ಕಾರಕ್ಕೆ ಉಳಿತಾಯವಾಗುವುದು ಎಂದು ತಿಳಿಸಿರುತ್ತಾರೆ.

ಪ್ರಸ್ತುತ ಈಗಾಗಲೇ ಗುತ್ತಿಗೆದಾರರು ರೂ.155,84,365.00/- ವೆಚ್ಚದ ಆರ್ಥಿಕ ಪ್ರಗತಿಯನ್ನು ಸಾಧಿಸಿದ್ದು, ಸರ್ಕಾರವು ರೂ.46,28,020.00/- ಗಳಷ್ಟು ಎಲ್.ಒ.ಸಿ.ಯನ್ನು 2003-04ನೇ ಸಾಲಿಗೆ ಬಿಡುಗಡೆ ಮಾಡಿರುತ್ತದೆ. ನಂತರ ಈ ಸಲುವಾಗಿ ಅನುದಾನ ಮೀಸಲಾತಿಯಾಗಿರುವುದಿಲ್ಲ. ಕಾಮಗಾರಿ ಸ್ಥಗಿತಗೊಂಡು 2 ವರ್ಷಗಳು ಸಂದಿದ್ದು, ಗುತ್ತಿಗೆದಾರರಿಗೆ ಹಳೆಯ ಬಾಕಿ ರೂ.110.00 ಲಕ್ಷಗಳನ್ನು ಸರ್ಕಾರವು ಬಾಕಿ ಉಳಿಸಿಕೊಂಡಿದೆ. ಆದ್ದರಿಂದ ಪ್ರಸ್ತುತ ಕಾಮಗಾರಿಯನ್ನು ಪೂರ್ಣಗೊಳಿಸಲು ರೂ.355.72 ಲಕ್ಷಗಳನ್ನು ಕೂಡಲೇ ಒದಗಿಸುವಂತೆ ಪ್ರಸ್ತಾವನೆಯಲ್ಲಿ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಯಿತು. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 153 ಇಟಿಐ, ಬೆಂಗಳೂರು, ದಿನಾಂಕ:31ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಬೆಂಗಳೂರಿನ ಬನ್ನೇರುಘಟ್ಟ ರಸ್ತೆಯಲ್ಲಿ ನಿರ್ಮಾಣದ ಹಂತದಲ್ಲಿರುವ ಕಾರ್ಮಿಕ ಭವನದ ಕಾಮಗಾರಿಗಾಗಿ ಹೆಚ್ಚುವರಿ ಅನುದಾನವಾಗಿ ರೂ.343.00 ಲಕ್ಷಗಳನ್ನು (ಮೂರು ನೂರ ನಲವತ್ತಾ ಮೂರು ಲಕ್ಷಗಳು ಮಾತ್ರ) ಲೆಕ್ಕ ಶೀರ್ಷಿಕೆ

4250-Capital outlay on Social and community services-203 Employment and Training Building (1) State plan schemes (Appendex-E Building) ಅಡಿಯಲ್ಲಿ ಒದಗಿಸುವುದಕ್ಕೆ ಮಂಜೂರಾತಿ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 189 ವೆಚ್ಚ-9/ 2005, ದಿನಾಂಕ: 29.03.2006ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಟಿ. ಶ್ರೀನಿವಾಸನ್**
ಪೀಠಾಧಿಕಾರಿ,
ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ)

ಪಿ.ಆರ್. 488

## ಜಲಸಂಪನ್ಮೂಲ (ಸಣ್ಣ ನೀರಾವರಿ) ಸಚಿವಾಲಯ

**ವಿಷಯ:** ಗುಲ್ಬರ್ಗಾ ಜಿಲ್ಲೆ ಯಾದಗೀರ್ ತಾಲ್ಲೂಕು ದುಪ್ಪಳ್ಳಿ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಭೂಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ: 24.12.2005ರ ಪತ್ರ ಸಂಖ್ಯೆ: ಮುಇಂ/ ಸನೀ(ಉ)ವ/ ಬಿಜೆಪಿ/ ಭೂಸ್ವಾಪ್ರ/ 2005-06/ 6247.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 24.12.2005ರ ಪತ್ರದಲ್ಲಿ ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಗುಲ್ಬರ್ಗಾ ಜಿಲ್ಲೆ ಯಾದಗೀರ್ ತಾಲ್ಲೂಕು ದುಪ್ಪಳ್ಳಿ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಯಾದಗೀರ್ ಸಿವಿಲ್ ನ್ಯಾಯಾಲಯವು (ಹಿರಿಯ ಶ್ರೇಣಿ) ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ರೂ.2,67,353.00 ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ: 15.09.1994.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 6(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ: 01.02.1996.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಅವಾರ್ಡ್ ಘೋಷಿಸಿದ ದಿನಾಂಕ: 27.06.1997.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರಧನದ ಐತೀರ್ಪಿನಂತೆ ಹಣ ಪಡೆದು ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1) ರನ್ವಯ ಯಾದಗೀರ್ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ) ದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣದಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರಧನಕ್ಕೆ ತೀರ್ಪು ನೀಡಿದೆ.

ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ಪತ್ರ ಸಂಖ್ಯೆ: ಲಾ 665 ಎಲ್ಎಸ್ಪಿ 2005 ದಿನಾಂಕ: 04.07.2005ರಲ್ಲಿ ಅಭಿಪ್ರಾಯ ನೀಡಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ. | ಎಲ್.ಎ.ಸಿ. ಪ್ರಕರಣ ಸಂ. | ನ್ಯಾಯಾಲಯದ ಆದೇಶದ ದಿನಾಂಕ | ಸ.ನಂ. | ವಿಸ್ತೀರ್ಣ ಎ-ಗುಂ | ಪರಿಹಾರಮೊತ್ತ ರೂ.ಗಳಲ್ಲಿ |
|---|---|---|---|---|---|
| 1. | 11/99 | 07.08.2003 | 252/3 | 0-22 | 30795 |
| 2. | 14/99 | 07.08.2003 | 278/3 | 0-32 | 44793 |
| 3. | 16/99 | 07.08.2003 | 372/3 | 0-08 | 11196 |
| 4. | 18/99 | 07.08.2003 | 385/2<br>386/3 | 0-12<br>0-06 | 25195 |
| 5. | 20/99 | 07.08.2003 | 368/3 | 0-18 | 25195 |
| 6. | 21/99 | 07.08.2003 | 369/3 | 0-18 | 25195 |
| 7. | 22/99 | 07.08.2003 | 430/3 | 1-00 | 55990 |
| 8. | 23/99 | 07.08.2003 | 429/3 | 0-35 | 48994 |
| | | | | ಒಟ್ಟು | 267353 |

ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 33 ಭೂಸ್ವಾಪ್ರ 2006, ಬೆಂಗಳೂರು, ದಿನಾಂಕ:21ನೇ ಮಾರ್ಚ್, 2006**

ಗುಲ್ಬರ್ಗಾ ಜಿಲ್ಲೆ ಯಾದಗೀರ್ ತಾಲ್ಲೂಕು ದುಪ್ಪಳ್ಳಿ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಭೂಸ್ವಾಧೀನಪಡಿಸಿಕೊಂಡ ದುಪ್ಪಳ್ಳಿ ಗ್ರಾಮಕ್ಕೆ ಸೇರಿದ ಸರ್ವೆ ನಂಬರುಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕ ಹಾಕಿದ ಪರಿಹಾರಧನ ಮೊತ್ತ ರೂ.2,67,353/- (ಎರಡು ಲಕ್ಷದ ಅರವತ್ತೇಳು ಸಾವಿರದ ಮುನ್ನೂರ ಐವತ್ತಮೂರು ರೂಪಾಯಿಗಳು ಮಾತ್ರ) ಗಳನ್ನು ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಪಾವತಿಸುವ ಮುನ್ನ ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಎರಡನೇ ಬಾರಿಗೆ ಪಾವತಿಯಾಗದಂತೆ ಪಾವತಿಸತಕ್ಕದ್ದು ಹಾಗೂ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2005-06ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702-00-800-1-00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳ ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಪ್ರಸ್ತಾವನೆಯಲ್ಲಿ ತಿಳಿಸಿರುವ ಸರ್ವೆ ನಂ.ಗಳ ಜಮೀನುಗಳು ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ ವರ್ಗಾಯಿಸಿಕೊಳ್ಳುವ ಬಗ್ಗೆ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2003 ದಿನಾಂಕ: 12.06.2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎನ್. ಮಂಜುನಾಥ**

ಪಿ.ಆರ್. 489

ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

## ತಿದ್ದುಪಡಿ ಆದೇಶ

### ಸಂಖ್ಯೆ: ಸಂಕಇ 4 ಕರಾಗೆ 2006, ಬೆಂಗಳೂರು, ದಿನಾಂಕ: 17ನೇ ಮಾರ್ಚ್, 2006

ಸರ್ಕಾರಿ ಆದೇಶ ಸಂಖ್ಯೆ: ಸಂಕಇ 4 ಕರಾಗೆ 2006 ದಿನಾಂಕ: 15.03.2006ರ ಆದೇಶದ ಕಂಡಿಕೆ 1ರಲ್ಲಿ ನಮೂದಿಸಿರುವ ಲೆಕ್ಕಶೀರ್ಷಿಕೆ "2205-00-104-0-01-051 (ಯೋಜನೇತರ) ಅಡಿಯಲ್ಲಿ ಉಳಿತಾಯವಾಗುವ ಮೊತ್ತ ರೂ.32.00 ಲಕ್ಷಗಳಲ್ಲಿ" ಎಂಬುದಕ್ಕೆ ಬದಲಾಗಿ ಲೆಕ್ಕಶೀರ್ಷಿಕೆ "2250-00-800-2-03 ದಸರಾ ಮಹೋತ್ಸವ (ಯೋಜನೇತರ)-059 ರಡಿಯಲ್ಲಿ ಉಳಿತಾಯವಾಗುವ ರೂ.4.00 ಲಕ್ಷಗಳಲ್ಲಿ" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ವಿಶಾಲಾಕ್ಷಮ್ಮ**

ಪಿ.ಆರ್. 490

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

## ತಿದ್ದುಪಡಿ ಆದೇಶ

### ಸಂಖ್ಯೆ: ಗ್ರಾಅಪ:135:ಆರ್‌ಆರ್‌ಸಿ:2005, ಬೆಂಗಳೂರು, ದಿನಾಂಕ: 22ನೇ ಫೆಬ್ರವರಿ, 2006

**ವಿಷಯ:** ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆ- ಕರ್ನಾಟಕ ಗ್ರಾಮೀಣ ರಸ್ತೆ ಅಭಿವೃದ್ಧಿ ಸಂಸ್ಥೆಯ ಅಧಿಕಾರಿ-ಸಿಬ್ಬಂದಿ ನೇಮಕಾತಿ ಬಗ್ಗೆ.

**ಪ್ರಸ್ತಾವನೆ:**

ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ:135: ಆರ್‌ಆರ್‌ಸಿ: 2005, ದಿನಾಂಕ: 30.09.2005 ಮತ್ತು 05.01.2006 ಹಾಗೂ ಅಧಿಸೂಚನೆ ಸಂಖ್ಯೆ: ಗ್ರಾಅಪ:135: ಆರ್‌ಆರ್‌ಸಿ:05, ದಿನಾಂಕ: 22.12.2005ರಲ್ಲಿ ಕರ್ನಾಟಕ ಗ್ರಾಮೀಣ ರಸ್ತೆ ಅಭಿವೃದ್ಧಿ ಸಂಸ್ಥೆಯ ತಾಂತ್ರಿಕ ಸಿಬ್ಬಂದಿ ವರ್ಗದಡಿ ಶ್ರೀ ಎನ್. ಶಿವನಾರಾಯಣ್, ಸಹಾಯಕ ಇಂಜಿನಿಯರ್ ಮತ್ತು ಗುಣನಿಯಂತ್ರಣ ತಪಾಸಣಾ ವಿಭಾಗಕ್ಕೆಂದು ಒಂದು ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಹುದ್ದೆಗೆ ಶ್ರೀ ವಿ. ಚಂದ್ರ ಮೋಹನ್ ಹಾಗೂ ಕಿರಿಯ ಇಂಜಿನಿಯರ್ ಹುದ್ದೆಗೆ ಶ್ರೀ ಅಬ್ದುಲ್ ಘನಿ ರವರುಗಳನ್ನು ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯಿಂದ ನಿಯೋಜನೆ ಆಧಾರದ ಮೇಲೆ ತುಂಬಲು ಆದೇಶಿಸಲಾಗಿತ್ತು. ಪ್ರಸ್ತುತ ಕೇಂದ್ರ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀ ವಿ. ಚಂದ್ರಮೋಹನ್‌ರವರನ್ನು ಯಥಾ ಸ್ಥಿತಿಯಲ್ಲಿಯೇ ಮುಂದುವರೆಸತಕ್ಕದ್ದೆಂದು ಮಾರ್ಪಡಿಸಿದೆ.

ಮುಂದುವರೆದಂತೆ ಶ್ರೀ ಎನ್. ಶಿವನಾರಾಯಣ್, ಸಹಾಯಕ ಇಂಜಿನಿಯರ್ ಮತ್ತು ಶ್ರೀ ಅಬ್ದುಲ್ ಘನಿ, ಕಿರಿಯ ಇಂಜಿನಿಯರ್ ರವರುಗಳ ಬದಲಾಗಿ ಶ್ರೀ ಟಿ.ಪಿ. ಮಹೇಶ್ ಚಂದ್ರ, ಸಹಾಯಕ ಇಂಜಿನಿಯರ್ ಮತ್ತು ಶ್ರೀ ವಿ. ವೆಂಕಟರಮಣಪ್ಪ, ಕಿರಿಯ ಇಂಜಿನಿಯರ್ ರವರುಗಳನ್ನು ಕೇಂದ್ರ ಕಛೇರಿಯಿಂದ ನಿಯೋಜನೆ ಮೇರೆಗೆ ಕರ್ನಾಟಕ ಗ್ರಾಮೀಣ ರಸ್ತೆ ಅಭಿವೃದ್ಧಿ ಸಂಸ್ಥೆಗೆ ತುಂಬಲು ಮಾರ್ಪಾಡು ಮಾಡಲಾಗಿದೆ.

**ಎನ್. ಮಂಜುಳ**

ನಿರ್ದೇಶಕರು,

ಪಿ.ಆರ್. 491

ಗ್ರಾಮೀಣ ಮೂಲಭೂತ ಸೌಲಭ್ಯಗಳು ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

## ಕಂದಾಯ ಸಚಿವಾಲಯ

## ತಿದ್ದುಪಡಿ ಆದೇಶ

### ಸಂಖ್ಯೆ: ಕಂಇ 633 ಮುನೋಮು 2005, ಬೆಂಗಳೂರು, ದಿನಾಂಕ:4ನೇ ಮಾರ್ಚ್, 2006

ಸರ್ಕಾರಿ ಆದೇಶ ಸಂಖ್ಯೆ: ಕಂಇ 633 ಮುನೋಮು 2005ರಲ್ಲಿನ ದಿನಾಂಕ: 14.02.2005ರ ಬದಲಾಗಿ ದಿನಾಂಕ: 14.02.2006 ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಮೇಶ್ ಕೆ. ಜಾಗೀರ್‌ದಾರ್**

ಪಿ.ಆರ್. 492

ಸರ್ಕಾರದ ಅಧೀನ ಕಾರ್ಯದರ್ಶಿ(ಆ/ಪ್ರ),
ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

## ತಿದ್ದುಪಡಿ ಆದೇಶ

**ಸಂಖ್ಯೆ: ಸಂಕಇ 43 ರಾಪಸಿ 2004, ಬೆಂಗಳೂರು, ದಿನಾಂಕ:13ನೇ ಮಾರ್ಚ್, 2006**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಂಕಇ 43 ರಾಪಸಿ 2004 ದಿನಾಂಕ: 24.11.2005ರಲ್ಲಿನ 4ನೇ ಪಂಕ್ತಿಯಲ್ಲಿರುವ "ದಿನಾಂಕ: 30.12.2004 ರಿಂದ" ಅನ್ನುವ ಪದಗಳಿಗೆ ಬದಲಾಗಿ "ದಿನಾಂಕ: 30.11.2004ರಿಂದ" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ವಿಶಾಲಾಕ್ಷಮ್ಮ**

ಪಿ.ಆರ್. 496

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## ಸಮಾಜ ಕಲ್ಯಾಣ ಸಚಿವಾಲಯ

## ಅಧಿಕೃತ ಜ್ಞಾಪನ

**ಸಂಖ್ಯೆ: ಸಕಇ 55 ಬಿಇಟಿ 2006, ಬೆಂಗಳೂರು, ದಿನಾಂಕ:18ನೇ ಮಾರ್ಚ್, 2006**

**ವಿಷಯ:** ಸಮಾಜ ಕಲ್ಯಾಣ ಸಚಿವಾಲಯದ ಅಧೀನದಲ್ಲಿ ಬರುವ ಇಲಾಖೆಗಳು ಹಾಗೂ ನಿಗಮ/ ಮಂಡಲಿ/ ಸಂಸ್ಥೆಗಳಿಗೆ ಇತರೆ ಇಲಾಖೆಗಳಿಂದ ಅಧಿಕಾರಿಗಳನ್ನು ನಿಯೋಜನೆ ಮೇರೆಗೆ ನೇಮಿಸಿಕೊಳ್ಳುವ ಬಗ್ಗೆ.

**ಪ್ರಸ್ತಾವನೆ:**

ಸಮಾಜ ಕಲ್ಯಾಣ ಸಚಿವಾಲಯದ ಅಧೀನದಲ್ಲಿ ಬರುವ ಇಲಾಖೆಗಳು ಹಾಗೂ ನಿಗಮ/ ಮಂಡಲಿ/ ಸಂಸ್ಥೆಗಳಲ್ಲಿ ಇತರೆ ಇಲಾಖೆಗಳಿಂದ ನಿಯೋಜನೆ ಮೇಲೆ ಅಧಿಕಾರಿಗಳು ಕಾರ್ಯ ನಿರ್ವಹಿಸುತ್ತಿರುವುದು ಸರಿಯಷ್ಟೆ. ಅದರಲ್ಲೂ ವಿಶೇಷವಾಗಿ ಶಿಕ್ಷಣ ಇಲಾಖೆಯ ಉಪನ್ಯಾಸಕರುಗಳು ಕಾರ್ಯ ನಿರ್ವಹಿಸುತ್ತಿರುವಲ್ಲಿ ಅವರ ಸೇವೆಯು ತೃಪ್ತಿಕರವಾಗಿಲ್ಲವೆಂದು ಬಹಳಷ್ಟು ಜನ ಪ್ರತಿನಿಧಿಗಳು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿರುತ್ತಾರೆ. ಆದುದರಿಂದ ಸಮಾಜ ಕಲ್ಯಾಣ ಸಚಿವಾಲಯದ ಅಧೀನದಲ್ಲಿ ಬರುವ ಇಲಾಖೆಗಳು ಹಾಗೂ ನಿಗಮ/ ಮಂಡಲಿ/ ಸಂಸ್ಥೆಗಳಲ್ಲಿ ನಿಯೋಜನೆ ಮೇರೆಗೆ ಹುದ್ದೆಗಳನ್ನು ಭರ್ತಿ ಮಾಡುವ ಸಂದರ್ಭದಲ್ಲಿ ಕಂದಾಯ ಇಲಾಖೆ ಹಾಗೂ ವಿವಿಧ ಅಭಿವೃದ್ಧಿ ಅಂದರೆ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ/ ಕೃಷಿ ಇಲಾಖೆ/ ಸಹಕಾರ ಇಲಾಖೆ/ ನಗರಾಭಿವೃದ್ಧಿ ಇಲಾಖೆಯಿಂದ ಮಾತ್ರ ಕರ್ನಾಟಕ ನಾಗರೀಕ, ನಿಯಮಗಳಿಗನುಸಾರವಾಗಿ ನಿಯೋಜನೆ ಮೇರೆಗೆ ಅಧಿಕಾರಿಗಳನ್ನು ನೇಮಿಸಿಕೊಳ್ಳುವ ಸಲುವಾಗಿ ಪ್ರಧಾನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಇಲಾಖಾ ಮುಖ್ಯಸ್ಥರುಗಳನ್ನೊಳಗೊಂಡಂತೆ ಒಂದು ಪರಾಮರ್ಶಕ ಸಮಿತಿಯನ್ನು (Screening Committee) ಈ ಕೆಳಕಂಡಂತೆ ರಚಿಸಿದೆ.

| | |
|---|---|
| 1. ಸರ್ಕಾರದ ಪ್ರಧಾನ ಕಾರ್ಯದರ್ಶಿ ಸಮಾಜ ಕಲ್ಯಾಣ ಇಲಾಖೆ. | ಅಧ್ಯಕ್ಷರು |
| 2. ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ | ಸದಸ್ಯರು |
| 3. ಆಯುಕ್ತರು, ಹಿಂದುಳಿದ ವರ್ಗಗಳ ಇಲಾಖೆ | ಸದಸ್ಯರು |
| 4. ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ | ಸದಸ್ಯರು |
| 5. ಸಂಬಂಧಿಸಿದ ಉಪ ಕಾರ್ಯದರ್ಶಿ ಸಮಾಜ ಕಲ್ಯಾಣ ಸಚಿವಾಲಯ | ಸದಸ್ಯ ಕಾರ್ಯದರ್ಶಿ. |

**ಬಿ. ರಾಮಸ್ವಾಮಿ**

ಪಿ.ಆರ್. 500

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಸಮಾಜ ಕಲ್ಯಾಣ ಇಲಾಖೆ.

**ವಿಷಯ:** ಶ್ರೀ ಎಸ್.ಆರ್. ಪಟಾಲಪ್ಪ, ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ ಕೋಲಾರ ಜಿಲ್ಲೆ, ಕೋಲಾರ. ಇವರ ಕರ್ತವ್ಯದಲ್ಲಿನ ಅಸಮರ್ಪಕ ಕಾರ್ಯವೈಖರಿ ಮೇಲೆ ಅಮಾನತ್ತಿನಲ್ಲಿಡುವ ಬಗ್ಗೆ.

**ಓದಲಾಗಿದೆ:** 1. ಆಯುಕ್ತರು ಸಮಾಜ ಕಲ್ಯಾಣ ಇಲಾಖೆ ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಸಕನಿ/ ಸಿಬ್ಬಂದಿ-10/ ಸಿಆರ್-51/ 2005-06, ದಿನಾಂಕ: 10.03.2006.

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು ಸಮಾಜ ಕಲ್ಯಾಣ ಇಲಾಖೆ ಇವರ ಅರೆ ಸರ್ಕಾರಿ ಪತ್ರದಲ್ಲಿ ಕೋಲಾರ ಜಿಲ್ಲೆಯ ವಿದ್ಯಾರ್ಥಿನಿಲಯಗಳ ಸಮರ್ಪಕ ನಿರ್ವಹಣೆ ವಿಷಯದಲ್ಲಿ ಶ್ರೀ ಪಟಾಲಪ್ಪ, ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ ಕೋಲಾರ, ಇವರ ವಿರುದ್ಧ ಕೇಳಿ ಬಂದ ಅನೇಕ ಗಂಭೀರವಾದ ದೂರುಗಳ ಮೇಲೆ ಸದರಿ ಜಿಲ್ಲೆಯ ಎಲ್ಲಾ 11 ತಾಲ್ಲೂಕುಗಳಲ್ಲಿರುವ ಇಲಾಖಾ ಸಂಸ್ಥೆಗಳಿಗೆ ಅನಿರೀಕ್ಷಿತ ಭೇಟಿ ನೀಡಿ ತಪಾಸಣೆ ಮಾಡಲು ಇಲಾಖೆಯ ಉನ್ನತ ಅಧಿಕಾರಿಗಳನ್ನೊಳಗೊಂಡ 11 ತನಿಖಾ ತಂಡಗಳನ್ನು ರಚಿಸಿ, ಈ ತಂಡಗಳನ್ನು ದಿನಾಂಕ: 03.03.2006 ಮತ್ತು 04.03.2006ರಂದು ಆಯಾ ತಾಲ್ಲೂಕುಗಳಿಗೆ ನಿಯೋಜಿಸಿ ತಪಾಸಣೆ ಮಾಡಲಾಗಿದ್ದು, ಸದರಿ ತಪಾಸಣೆ ವರದಿ ಅನ್ವಯ ಪ್ರತಿ ತಾಲ್ಲೂಕಿನಲ್ಲಿ ತಪಾಸಣೆ ಸಮಯದಲ್ಲಿ ಗೋಚರವಾಗಿರುವ ಪ್ರಮುಖ ಲೋಪಗಳು ಈ ಕೆಳಕಂಡಂತೆ ಇರುತ್ತವೆ.

1. ಜಿಲ್ಲೆಯಾದ್ಯಂತ ವಿದ್ಯಾರ್ಥಿನಿಲಯಗಳಲ್ಲಿ ಸರ್ಕಾರವು ವಿದ್ಯಾರ್ಥಿನಿಲಯಗಳಿಗೆ ಕಲ್ಪಿಸಿರುವ ಮೂಲಭೂತ ಸೌಕರ್ಯಗಳನ್ನು ಸದ್ವಿನಿಯೋಗ ಮಾಡದೇ ವಿದ್ಯಾರ್ಥಿಗಳಿಗೆ ಸೌಲಭ್ಯದಿಂದ ವಂಚಿಸಿರುವುದು.
2. ವಿದ್ಯುಚ್ಛಕ್ತಿ ಅಡಚಣೆಯಾದಲ್ಲಿ ವಿದ್ಯಾಭ್ಯಾಸಕ್ಕೆ ತೊಂದರೆಯಾಗದಂತೆ ಸರ್ಕಾರವು ಕಲ್ಪಿಸಿರುವ ಯು.ಪಿ.ಎಸ್. ಸೌಲಭ್ಯವನ್ನು ಪ್ರಸ್ತುತ ಪರೀಕ್ಷಾ ಸಮಯವಾಗಿದ್ದರೂ ಸಹ ವಿದ್ಯಾರ್ಥಿಗಳ ಶೈಕ್ಷಣಿಕ ಅಭ್ಯಾಸಕ್ಕಾಗಿ ಒದಗಿಸುವುದರಲ್ಲಿ ವಿಫಲರಾಗಿರುತ್ತಾರೆ.

3. ವಿದ್ಯಾರ್ಥಿ ನಿಲಯಗಳಲ್ಲಿ ಅನಿಲ ಸಂಪರ್ಕವಿದ್ದರೂ ಸಹಾ ಕೆಲವು ವಿದ್ಯಾರ್ಥಿ ನಿಲಯಗಳಲ್ಲಿ ಇದನ್ನು ಉಪಯೋಗಿಸದೆಯೇ ದುರುದ್ದೇಶ ಪೂರ್ವಕವಾಗಿಯೇ ಸರ್ಕಾರದ ಬೊಕ್ಕಸಕ್ಕೆ ಅನಗತ್ಯ ಆರ್ಥಿಕ ಹೊರೆಯಾಗುವಂತೆ ಸೌದೆ ಖರೀದಿಸಿ ಅಡುಗೆ ಮಾಡುವುದು ಕಂಡು ಬರುತ್ತದೆ.
4. ವಿದ್ಯಾರ್ಥಿನಿಲಯಗಳ ನಿರ್ವಹಣೆಯ ಬಗ್ಗೆ ಗುರುತರವಾದ ಜವಾಬ್ದಾರಿ ಹೊತ್ತಿರುವ ನಿಲಯಪಾಲಕರು ತಮ್ಮ ದೈನಂದಿನ ದಿನಚರಿಯಂತೆ ವಿದ್ಯಾರ್ಥಿನಿಲಯದಲ್ಲಿದ್ದು, ಊಟದ ವ್ಯವಸ್ಥೆ, ಮಕ್ಕಳ ಶೈಕ್ಷಣಿಕ ಪ್ರಗತಿ ಬಗ್ಗೆ ಒತ್ತು ಕೊಡದೇ ಮನಸೋ ಇಚ್ಛೆ ವಿದ್ಯಾರ್ಥಿನಿಲಯಗಳಿಗೆ ಬಂದು ಹೋಗುವ ಪರಿಪಾಠ ಹೊಂದಿರುವಂತಹ ಅಶಿಸ್ತಿಗೆ ಕಾರಣರಾಗಿರುತ್ತಾರೆ.
5. ಪ್ರತಿ ವಿದ್ಯಾರ್ಥಿನಿಲಯಗಳಲ್ಲಿ ದಾಖಲಾತಿ ಸಂಖ್ಯೆಗೆ ಅನುಗುಣವಾಗಿ ವಿದ್ಯಾರ್ಥಿಗಳು ವಾಸ್ತವ್ಯ ಇಲ್ಲದಿರುವುದನ್ನು ಗಮನಿಸಲಾಗಿದೆ. ಪ್ರತಿ ನಿಲಯದಲ್ಲೂ ಶೇ.100ರಷ್ಟು ದಾಖಲಾತಿ ಎಂದು ಹಾಜರಾತಿ ನೀಡುತ್ತಿರುವ ಸಂಖ್ಯೆಗಿಂತ ಶೇ.50ರಿಂದ 60ಕ್ಕಿಂತಲೂ ಕಡಿಮೆ ದಾಖಲಾತಿ ಇರುವುದು ದೃಢಪಟ್ಟಿರುತ್ತದೆ. ಆದರೆ ಪ್ರತಿ ನಿಲಯದಲ್ಲಿ ಮಂಜೂರಾತಿ ಸಂಖ್ಯೆಗೆ ಅನುಗುಣವಾಗಿ ಶೇ.100 ಹಾಜರಾತಿಯನ್ನು ತೋರಿಸಿ ಆ ಪ್ರಕಾರ ವೆಚ್ಚ ತೋರಿಸಿ ಸರ್ಕಾರದ ಹಣ ದುರುಪಯೋಗ ಮಾಡುತ್ತಿರುವ ಅಂಶ ಗಮನಕ್ಕೆ ಬಂದಿದ್ದು, ಇದು ಒಂದು ದೊಡ್ಡ ಮೋಸದ ಜಾಲವಾಗಿ ಪರಿವರ್ತಿಸಲ್ಪಟ್ಟಿದೆ.
6. ವಿದ್ಯಾರ್ಥಿನಿಲಯಗಳಿಗೆ ಸಕಾಲಿಕ ವೇಳೆಯಲ್ಲಿ ಆಹಾರ ಸಾಮಗ್ರಿಗಳು ಸರಬರಾಜು ಆಗುತ್ತಿಲ್ಲ. ಅನೇಕ ನಿಲಯಗಳಲ್ಲಿ ಆಹಾರ ಪದಾರ್ಥಗಳು ರಿಜಿಸ್ಟರ್‌ಗಳ ಪ್ರಕಾರ ದಾಸ್ತಾನಿನಲ್ಲಿ ಇಲ್ಲದಿದ್ದರೂ ಸಹಾ ನಿಯಮಬಾಹಿರವಾಗಿ ಶೇಖರಿಸಿಡಲಾಗಿದೆ. ಇದೇ ದಾಸ್ತಾನನ್ನು ಮುಂದಿನ ತಿಂಗಳಿಗೆ ಹೊಂದಾಣಿಕೆ ಮಾಡಿ ಹೊಸ ಖರೀದಿ ಎಂದು ತೋರಿಸಿ ಆ ತಿಂಗಳಿನ ಆಹಾರ ಸಾಮಗ್ರಿಗಳ ಹಣ ದುರುಪಯೋಗ ಪಡಿಸಿಕೊಳ್ಳಲಾಗುತ್ತಿದೆ.
7. ಪ್ರತಿ ನಿಲಯದ ಒಳ ಮತ್ತು ಹೊರ ಆವರಣ, ಅವುಗಳ ಶೌಚಾಲಯಗಳು ಅಶುಚಿಯಿಂದ ಕೂಡಿದ್ದು, ಈ ಬಗ್ಗೆ ಇಲಾಖೆಯ ಜಿಲ್ಲಾ ಆಡಳಿತ ಗಮನ ಹರಿಸಿಲ್ಲದಿರುವುದು ಕಂಡು ಬಂದಿರುತ್ತದೆ.
8. ಯಾವುದೇ ನಿಲಯದಲ್ಲಿ ಸರ್ಕಾರದ ಮಾರ್ಗಸೂಚಿಯನ್ವಯ ನಿರ್ವಹಿಸಬೇಕಾದ ವಹಿಗಳನ್ನು ಹಾಗೂ ನಿರ್ವಹಣಾ ಕ್ರಮಗಳನ್ನು ಅನುಸರಿಸದೆಯೇ ಇವುಗಳನ್ನು ಮನಸೋ ಇಚ್ಛೆ ನಿರ್ವಹಿಸಿ ನಿಯಮಗಳನ್ನು ಗಾಳಿಗೆ ತೂರಿರುತ್ತಾರೆ.
9. ಆಯಾ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು ನಿಲಯಗಳಿಗೆ ಭೇಟಿ ನೀಡಿದ್ದರೂ ಸಹ ವಿದ್ಯಾರ್ಥಿನಿಲಯ ಮೇಲ್ವಿಚಾರಕರುಗಳಿಗೆ ಸೂಕ್ತ ಮಾರ್ಗದರ್ಶನ, ತರಬೇತಿ ಹಾಗೂ ಸೂಚನೆ ನೀಡುವುದರಲ್ಲಿ ವಿಫಲರಾಗಿರುತ್ತಾರೆ. ಇದರಿಂದಾಗಿ ವಿದ್ಯಾರ್ಥಿನಿಲಯ ಮೇಲ್ವಿಚಾರಕರುಗಳಲ್ಲಿ ಅಶಿಸ್ತು ಉಂಟಾಗಿರುವುದು ದೃಢಪಟ್ಟಿದೆ. ಇದಕ್ಕೆ ಅಧಿಕಾರಿಗಳನ್ನು ನೇರವಾಗಿ ಜವಾಬ್ದಾರರನ್ನಾಗಿ ಮಾಡಬೇಕಾಗುತ್ತದೆ.
10. ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು ಪ್ರಸಕ್ತ ಸಾಲಿನಲ್ಲಿ ಜಿಲ್ಲಾ ವ್ಯಾಪ್ತಿಯಲ್ಲಿರುವ ಯಾವುದೇ ತಾಲ್ಲೂಕಿನಲ್ಲೂ ಪ್ರವಾಸ ಮಾಡಿ ತಪಾಸಣೆ ನಡೆಸಿಲ್ಲವೆಂಬುದು ಪ್ರತಿ ನಿಲಯಗಳ ದಾಖಲೆಗಳಿಂದ ಹಾಗೂ ನಿಲಯಗಳಲ್ಲಿ ವಿದ್ಯಾರ್ಥಿಗಳು ತನಿಖಾಧಿಕಾರಿಗಳಿಗೆ ನೀಡಿರುವ ಮೌಖಿಕ ಹೇಳಿಕೆ ಪ್ರಕಾರ ತಿಳಿದು ಬಂದಿರುತ್ತದೆ. ಇದರಿಂದ ಈ ಅಧಿಕಾರಿಗಳು ನಿಯಮಗಳನ್ನು ಸುಸ್ಥಿತಿಯಲ್ಲಿಡುವುದು, ಸಿಬ್ಬಂದಿಯನ್ನು ಕರ್ತವ್ಯಪರರನ್ನಾಗಿ ಮಾಡಿ ಶಿಸ್ತಿನಲ್ಲಿಡುವುದು ಇವುಗಳು ಮುಖ್ಯವಾಗಿರದೇ, ಆಡಳಿತ ಹದೆಗೆಡಲು ಸಹಕರಿಸಿರುತ್ತಾರೆಂಬುದು ಕಂಡುಬರುತ್ತದೆ.

ಮೇಲ್ಕಂಡ ಲೋಪಗಳಿಂದ ಶ್ರೀ ಎಸ್.ಆರ್. ಪಟಾಲಪ್ಪ, ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಯಾಗಿ ಕೋಲಾರದಲ್ಲಿ ಕರ್ತವ್ಯ ನಿರ್ವಹಿಸದೇ ಹಾಗೂ ಇಲಾಖೆಯ ಕಾರ್ಯಕ್ರಮಗಳನ್ನು ಸರಿಯಾಗಿ ಅನುಷ್ಠಾನಗೊಳಿಸದೇ ನಿಲಯಗಳನ್ನು ದುಸ್ಥಿತಿಗೆ ತಂದು ಆಡಳಿತ ಕುಸಿಯಲು ಕಾರಣರಾಗಿರುತ್ತಾರೆ. ಇದರಿಂದ ಇಡೀ ರಾಜ್ಯದಲ್ಲಿಯೇ ವಿದ್ಯಾರ್ಥಿನಿಲಯಗಳ ನಿರ್ವಹಣೆ ಬಗ್ಗೆ ಅನೇಕ ರೀತಿಯ ಗಂಭೀರ ದೂರುಗಳು ಕೋಲಾರ ಜಿಲ್ಲೆಯಿಂದಲೇ ಬರುತ್ತಿದ್ದು, ಈ ಅಧಿಕಾರಿ ತನ್ನ ಅಧೀನದ ಅಧಿಕಾರಿ ಹಾಗೂ ಸಿಬ್ಬಂದಿಯನ್ನು ನಿಯಂತ್ರಣದಲ್ಲಿಟ್ಟುಕೊಳ್ಳದೇ ವ್ಯವಸ್ಥಿತವಾಗಿ ಅವ್ಯವಹಾರದಲ್ಲಿ ಭಾಗಿಯಾಗಿರುತ್ತಾರೆಂಬುದು ತಪಾಸಣೆ ವರದಿಗಳಿಂದ ಕಂಡು ಬರುತ್ತಿದೆ.

ಈ ಎಲ್ಲಾ ಆರೋಪಗಳನ್ನು ವಿಚಾರಣೆಗೆ ಒಳಪಡಿಸುವುದರೊಂದಿಗೆ ಶ್ರೀ ಎಸ್.ಆರ್. ಪಟಾಲಪ್ಪ, ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ ಕೋಲಾರ ಇವರನ್ನು ಕೂಡಲೇ ಅಮಾನತ್ತಿನಲ್ಲಿರಿಸುವಂತೆ ಆಯುಕ್ತರು ಸಮಾಜ ಕಲ್ಯಾಣ ಇಲಾಖೆ ಇವರು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 61 ಪಕಸೇ 2006, ಬೆಂಗಳೂರು, ದಿನಾಂಕ:25ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣ ಹಿನ್ನಲೆಯಲ್ಲಿ ಶ್ರೀ ಎಸ್.ಆರ್. ಪಟಾಲಪ್ಪ, ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ, ಕೋಲಾರ ಜಿಲ್ಲೆ, ಕೋಲಾರ ಇವರ ವಿರುದ್ಧದ ಆರೋಪಗಳು ಮೇಲ್ನೋಟಕ್ಕೆ ನಿಜವೆಂದು ಕಂಡು ಬಂದಿರುವುದರಿಂದ ಇವರನ್ನು ಸೇವೆಯಲ್ಲಿ ಮುಂದುವರೆಸುವುದು ಉಚಿತವಲ್ಲವೆಂದು ತೀರ್ಮಾನಿಸಿ, ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳ 11ರಡಿಯಲ್ಲಿ ವಿಚಾರಣೆಯನ್ನು ಕಾಯ್ದಿರಿಸಿ, ಸದರಿ ನಿಯಮಾವಳಿಗಳ ನಿಯಮ 10 (1)(ಎ) ರಡಿಯಲ್ಲಿ ಅಧಿಕಾರಿಯನ್ನು ಈ ಕೂಡಲೇ ಜಾರಿಗೆ ಬರುವಂತೆ ಅಮಾನತ್ತಿನಲ್ಲಿರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್. ಶೇಖರಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಮಾಜ ಕಲ್ಯಾಣ ಇಲಾಖೆ.

ಪಿ.ಆರ್. 501

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಬೆಂಗಳೂರು ಮಹಾನಗರ ಪ್ರದೇಶದಲ್ಲಿನ ಬೊಮ್ಮನಹಳ್ಳಿ ನಗರಸಭೆ ವ್ಯಾಪ್ತಿಯಲ್ಲಿ ಬರುವ ಕೋಣನಕುಂಟೆ ಮತ್ತು ಕೊತ್ತನೂರು ದಿಣ್ಣೆ ಇವುಗಳಿಗೆ ಸಂಚಿತ ಹಣಕಾಸು ಚೌಕಟ್ಟಿನೊಳಗೆ ನೀರು ಸರಬರಾಜು ಮತ್ತು ಒಳಚರಂಡಿ ಯೋಜನೆಯನ್ನು ಅನುಷ್ಠಾನ ಬಳಕೆದಾರರ ಬಂಡವಾಳ ವಂತಿಕೆಯನ್ನು ಸಂಗ್ರಹಿಸುವ ದಿನಾಂಕವನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ನಅಇ 27 ಎಂಎನ್‌ಐ 2000, ದಿನಾಂಕ: 26.12.2003.
2. ಸರ್ಕಾರದ ಆದೇಶ ಸಂಖ್ಯೆ: ನಅಇ 36 ಎಂಎನ್‌ಐ 2004, ದಿನಾಂಕ: 13.02.2004.
3. ಸರ್ಕಾರದ ಆದೇಶ ಸಂಖ್ಯೆ: ನಅಇ 36 ಎಂಎನ್‌ಐ 2004, ದಿನಾಂಕ: 26.03.2004.
4. ಸರ್ಕಾರದ ಆದೇಶ ಸಂಖ್ಯೆ: ನಅಇ 145 ಎಂಎನ್‌ಐ 2004, ದಿನಾಂಕ: 28.02.2005 ಮತ್ತು 09.03.2005.
5. ಆರ್ಥಿಕ ವ್ಯವಸ್ಥಾಪಕರು, ಕರ್ನಾಟಕ ನಗರ ಮೂಲಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ಸಂಸ್ಥೆ, ಬೆಂಗಳೂರು, ಇವರ ಪತ್ರ ಸಂಖ್ಯೆ: ಕೆಯುಐಡಿಎಫ್‌ಸಿ/ ಜಿಬಿಡಬ್ಲ್ಯೂಎಎಸ್‌ಪಿ/ ಎಂಎಫ್/ 3432/ 2005-06, ದಿನಾಂಕ: 08.02.2006.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 26.12.2003ರ ಆದೇಶದಲ್ಲಿ ಬೆಂಗಳೂರು ಮಹಾನಗರ ಪ್ರದೇಶದಲ್ಲಿ ಬರುವ ಬೊಮ್ಮನಹಳ್ಳಿ, ಬ್ಯಾಟರಾಯನಪುರ, ದಾಸರಹಳ್ಳಿ, ಕೃಷ್ಣರಾಜಪುರಂ, ಮಹದೇವಪುರಂ, ರಾಜಾರಾಜೇಶ್ವರಿನಗರ ಮತ್ತು ಯಲಹಂಕ 7 ನಗರಸಭೆಗಳು ಮತ್ತು 1 ಕೆಂಗೇರಿ ಪುರಸಭೆಗೆ ರೂ. 658.64 ಕೋಟಿ ಒಟ್ಟು ಅಂದಾಜು ವೆಚ್ಚದಲ್ಲಿ ನೀರು ಪೂರೈಕೆ ಹಾಗೂ ಒಳಚರಂಡಿ ಯೋಜನೆಯನ್ನು ಅನುಷ್ಠಾನಗೊಳಿಸಲು ಮಂಜೂರಾತಿ ನೀಡಲಾಗಿದೆ. ಸದರಿ ಆದೇಶದಲ್ಲಿ ನಮೂದಿಸಿರುವಂತೆ ಯೋಜನೆಯಲ್ಲಿ ಪಾಲ್ಗೊಳ್ಳುವ ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳು ಗೃಹ ಬಳಕೆದಾರರಿಂದ ಪ್ರತಿ ಸ್ವತ್ತಿಗೆ ರೂ.8,500/- ಮತ್ತು ಗೃಹೇತರ ಬಳಕೆದಾರರಿಂದ ಪ್ರತಿ ಸ್ವತ್ತಿಗೆ ರೂ.17,000/- ರಂತೆ ಒಂದು ಬಾರಿ ಬಂಡವಾಳ ವಂತಿಗೆಯನ್ನು ಸಂಗ್ರಹಿಸಲು ಸೂಚಿಸಲಾಗಿದೆ. ಈ ವಂತಿಗೆಯ ಮೊತ್ತವು ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಲಿಯು ವಿಧಿಸುವ ಮಾರ್ಗ ಮತ್ತು ಸಂಪರ್ಕ ವೆಚ್ಚ ಹಾಗೂ ಸ್ವತ್ತಿನ ಮಾಲೀಕರು ನಗರ ಸ್ಥಳೀಯ ಸಂಸ್ಥೆಗಳಿಗೆ ಸಂದಾಯ ಮಾಡಬೇಕಾದ ರಸ್ತೆ ಅಗೆಯುವ ವೆಚ್ಚಗಳು ಸೇರಿರುವುದಿಲ್ಲ.

ಮೇಲೆ (2)ರಲ್ಲಿ ಓದಲಾದ ದಿನಾಂಕ: 13.02.2004ರ ಆದೇಶಗಳಲ್ಲಿ ಫಲಾನುಭವಿಗಳು ಬಂಡವಾಳ ವಂತಿಗೆಯ (ಬಿಸಿಸಿ) ವಿನ್ಯಾಸವನ್ನು (structure) ಸರ್ಕಾರವು ನಿರ್ದಿಷ್ಟವಾಗಿ ತಿಳಿಸಿದೆ. 40'x60' ರ ವಿನ್ಯಾಸದ ನಿವೇಶನಗಳಿಗೆ ಮತ್ತು 1200 ಚದರಡಿ ವರೆಗಿನ ವಸತಿ ಸಮುಚ್ಚಾಲಯಗಳಿಗೆ ರೂ.10,000/- ಮತ್ತು 40'x60'ರ ಅಳತೆ ಮೀರಿದ ನಿವೇಶನಗಳಿಗೆ ಹಾಗೂ 1200 ಚದರಡಿ ಮೀರಿದ ವಸತಿ ಸಮುಚ್ಚಾಲಯಗಳಿಗೆ ರೂ.15,000/- ಫಲಾನುಭವಿ ಬಂಡವಾಳ ವಂತಿಗೆಯ ಸಂಗ್ರಹಣೆಯನ್ನು ನಿಗದಿಪಡಿಸಿದೆ. ಗೃಹೇತರ ಸ್ವತ್ತುಗಳು/ ವಾಣಿಜ್ಯ ಸ್ವತ್ತುಗಳಿಗೆ ಸಂಬಂಧಿಸಿದಂತೆ ವಂತಿಗೆಯನ್ನು ರೂ.20,000/- ನಿಗದಿಪಡಿಸಿ ಸದರಿ ವಂತಿಗೆ ಸಂಗ್ರಹಣೆಗೆ ಕಡೇ ದಿನಾಂಕವನ್ನು 31.07.2004 ಎಂದು ಪ್ರಕಟಿಸಲಾಗಿತ್ತು. ಇದಾದ ನಂತರ ಹೆಚ್ಚುವರಿ 5000/- ಮೊತ್ತವನ್ನು ಪಾವತಿ ಮಾಡಬೇಕೆಂದು ಆದೇಶಿಸಿತ್ತು.

ಮೇಲೆ (4)ರಲ್ಲಿ ಓದಲಾದ ದಿನಾಂಕ: 28.02.2005 ಮತ್ತು 09.03.2005ರ ಆದೇಶಗಳಲ್ಲಿ ಬೆಂಗಳೂರು ಮಹಾನಗರ ಪ್ರದೇಶದಲ್ಲಿ ಬರುವ ಬೊಮ್ಮನಹಳ್ಳಿ, ಬ್ಯಾಟರಾಯನಪುರ, ದಾಸರಹಳ್ಳಿ, ಕೃಷ್ಣರಾಜಪುರಂ, ಮಹದೇವಪುರ, ರಾಜಾರಾಜೇಶ್ವರಿನಗರ ಮತ್ತು ಯಲಹಂಕ 7 ನಗರಸಭೆಗಳು ಮತ್ತು 1 ಕೆಂಗೇರಿ ಪುರಸಭೆ ಪ್ರದೇಶಗಳಲ್ಲಿ ಬರುವ ವಿವಿಧ ಮಾದರಿಯ ಆಸ್ತಿಗಳಿಗೆ ಫಲಾನುಭವಿಗಳಿಗೆ ಬಂಡವಾಳ ವಂತಿಕೆ (ಬಿ.ಸಿ.ಸಿ.) ಸಂಗ್ರಹಣೆ ಕುರಿತು ಪರಿಷ್ಕೃತ ವಿನ್ಯಾಸಕ್ಕೆ ಸರ್ಕಾರವು ಅನುಮೋದನೆ ನೀಡಿ, ಬಂಡವಾಳ ವಂತಿಗೆಯನ್ನು ಸಂಗ್ರಹಿಸುವ ದಿನಾಂಕವನ್ನು 31ನೇ ಜುಲೈ 2005ರವರೆಗೆ ವಿಸ್ತರಿಸಿ ಆದೇಶಿಸಲಾಗಿತ್ತು.

ಮೇಲೆ (5)ರಲ್ಲಿ ಓದಲಾದ ದಿನಾಂಕ: 08.02.2006ರ ಪತ್ರದಲ್ಲಿ ಆರ್ಥಿಕ ವ್ಯವಸ್ಥಾಪಕರು, ಕರ್ನಾಟಕ ನಗರ ಮೂಲಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ಸಂಸ್ಥೆ, ಬೆಂಗಳೂರು, ಇವರು ದಿನಾಂಕ: 18.01.2006ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಇತ್ತೀಚೆಗೆ ಬೊಮ್ಮನಹಳ್ಳಿ ನಗರಸಭೆ ವ್ಯಾಪ್ತಿಗೆ ಒಳಪಡಿಸಿರುವ ಕೋಣನಕುಂಟೆ ಮತ್ತು ಕೊತ್ತನೂರು ದಿಣ್ಣೆ ಗ್ರಾಮಗಳಿಗೆ ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಯೋಜನೆಯನ್ನು ಅನುಷ್ಠಾನಗೊಳಿಸಲು ಇರುವ ಬಳಕೆದಾರರ ಸಂಗ್ರಹ ವಂತಿಕೆ ದಿನಾಂಕವನ್ನು ದಿನಾಂಕ: 30.09.2006ರವರೆಗೆ ವಿಸ್ತರಿಸಲು ನಿರ್ಧರಿಸಲಾಗಿದೆ. ಕಾರಣ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: 162 ಎಂಎನ್‌ಐ 2005, ಬೆಂಗಳೂರು, ದಿನಾಂಕ: 22ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಗಣಿಸಿ ಸರ್ಕಾರಿ ಆದೇಶ ಸಂಖ್ಯೆ: 145 ಎಂಎನ್‌ಐ 2004 ದಿನಾಂಕ: 28.02.2005ರಲ್ಲಿ ಸೂಚಿಸಿರುವ ವಿವಿಧ ಮಾದರಿಯ ನಿವೇಶನಗಳಿಗೆ, ಬೊಮ್ಮನಹಳ್ಳಿ ನಗರಸಭೆ ವ್ಯಾಪ್ತಿಗೆ ಇತ್ತೀಚೆಗಷ್ಟೇ ಒಳಪಡಿಸಿರುವ ಕೋಣನಕುಂಟೆ ಮತ್ತು ಕೊತ್ತನೂರು ದಿಣ್ಣೆ ಗ್ರಾಮಗಳ ಫಲಾನುಭವಿಗಳಿಗೆ ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಯೋಜನೆಯನ್ನು ಅನುಷ್ಠಾನಗೊಳಿಸಲು ಇರುವ ಬಳಕೆದಾರರ ಸಂಗ್ರಹ ವಂತಿಕೆ ದಿನಾಂಕವನ್ನು ದಿನಾಂಕ: 30.09.2006ರವರೆಗೆ ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವ್ಹಿ.ಆರ್. ಇಲಕಲ್**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

ಪಿ.ಆರ್. 502

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ (ಜನಸ್ಪಂದನಾ ಕೋಶ) ಪ್ರಧಾನ ಕಾರ್ಯದರ್ಶಿ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 51 ಸಸಿವಿ 2003, ದಿನಾಂಕ: 17.06.2003.

2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 51 ಸಸಿವಿ 2003, ದಿನಾಂಕ: 23.12.2003.

3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 17 ಸಸಿವಿ 2005, ದಿನಾಂಕ: 24.03.2005.

4. ಪ್ರಧಾನ ಕಾರ್ಯದರ್ಶಿ, ಸಿಆಸುಇ ಇಲಾಖೆ (ಜನಸ್ಪಂದನಾ ಕೋಶ) ಇವರ ಅರೆ ಸರ್ಕಾರ ಪತ್ರ ಸಂಖ್ಯೆ: ಡಿಪಿಎಆರ್/ ಪಿಎಸ್/ ಜೆಎಸ್/ 53/ 2006, ದಿನಾಂಕ: 06.03.2006.

**ಪ್ರಸ್ತಾವನೆ:**

ಮೇಲೆ ಕ್ರಮಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ಪ್ರಧಾನ ಕಾರ್ಯದರ್ಶಿ (ಸಾರ್ವಜನಿಕ ದೂರುಗಳು) ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ 2 ವರ್ಷಗಳ ಅವಧಿಗೆ ಸೃಜಿಸಲಾಗಿದೆ.

| | | |
|---|---|---|
| 1. | ಆಪ್ತ ಕಾರ್ಯದರ್ಶಿ ಗ್ರೇಡ್-2: ಪತ್ರಾಂಕಿತ ಆಪ್ತ ಸಹಾಯಕ | 01 ಹುದ್ದೆ |
| 2. | ಪತ್ರಾಂಕಿತ ಆಪ್ತ ಸಹಾಯಕ: ಹಿರಿಯ ಶೀಘ್ರಲಿಪಿಗಾರ | 01 ಹುದ್ದೆ |
| 3. | ಶಾಖಾಧಿಕಾರಿ: ಹಿರಿಯ ಸಹಾಯಕ | 01 ಹುದ್ದೆ |
| 4. | ವಾಹನ ಚಾಲಕ | 01 ಹುದ್ದೆ |
| 5. | ದಲಾಯತ್ | 02 ಹುದ್ದೆಗಳು |

ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ಎರಡು ಶೀಘ್ರಲಿಪಿಗಾರರ ಹುದ್ದೆ ಹಾಗೂ ಒಂದು ಕಿರಿಯ ಸಹಾಯಕರ ಹುದ್ದೆಯನ್ನು ಸೃಜಿಸಲಾಗಿದೆ.

ಮೇಲೆ ಓದಲಾಗಿರುವ (3)ರಲ್ಲಿ ಓದಲಾಗಿರುವ ದಿನಾಂಕ: 24.03.2005ರ ಸರ್ಕಾರಿ ಆದೇಶದಲ್ಲಿ ಈ ಎಲ್ಲಾ ಹುದ್ದೆಗಳನ್ನು ದಿನಾಂಕ: 26.05.2005 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಿದ್ದು, ಈ ವಿಸ್ತರಿತ ಅವಧಿಯು ದಿನಾಂಕ: 25.05.2006ಕ್ಕೆ ಪೂರ್ಣಗೊಳ್ಳಲಿದೆ. ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಜನಸ್ಪಂದನಾ ಕೋಶ) ಇವರು ಕ್ರಮ ಸಂಖ್ಯೆ (4)ರಲ್ಲಿ ಓದಲಾದ ದಿನಾಂಕ: 06.03.2006ರ ಅರೆ ಸರ್ಕಾರಿ ಪತ್ರದಲ್ಲಿ ಈ ಎಲ್ಲಾ ಹುದ್ದೆಗಳನ್ನು ದಿನಾಂಕ: 26.05.2005 ರಿಂದ ಜಾರಿಗೆ ಬರುವಂತೆ ಮತ್ತೆ 2 ವರ್ಷಗಳ ಅವಧಿಗೆ ಮುಂದುವರೆದು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ್ದು, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 24 ಸಸಿಪಿ 2006, ಬೆಂಗಳೂರು, ದಿನಾಂಕ: 20ನೇ ಮಾರ್ಚ್, 2006**

ಕರ್ನಾಟಕ ಸರ್ಕಾರ ಸಚಿವಾಲಯದ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಪ್ರಧಾನ ಕಾರ್ಯದರ್ಶಿ (ಜನಸ್ಪಂದನಾ ಕೋಶ) ಹಾಗೂ ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 26.05.2006 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ.

| | | |
|---|---|---|
| 1. | ಆಪ್ತ ಕಾರ್ಯದರ್ಶಿ ಗ್ರೇಡ್-2: ಪತ್ರಾಂಕಿತ ಆಪ್ತ ಸಹಾಯಕ | 01 ಹುದ್ದೆ |
| 2. | ಪತ್ರಾಂಕಿತ ಆಪ್ತ ಸಹಾಯಕ: ಹಿರಿಯ ಶೀಘ್ರಲಿಪಿಗಾರ | 01 ಹುದ್ದೆ |
| 3. | ಶಾಖಾಧಿಕಾರಿ: ಹಿರಿಯ ಸಹಾಯಕ | 01 ಹುದ್ದೆ |
| 4. | ಶೀಘ್ರಲಿಪಿಗಾರ | 01 ಹುದ್ದೆ |
| 5. | ಕಿರಿಯ ಸಹಾಯಕ | 01 ಹುದ್ದೆ |
| 6. | ದಲಾಯತ್ | 02 ಹುದ್ದೆಗಳು |
| 7. | ವಾಹನ ಚಾಲಕ | 01 ಹುದ್ದೆ |

ದಿನಾಂಕ: 10.07.96ರ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96ರಲ್ಲಿನ ಅಧಿಕಾರ ಪ್ರತ್ಯಾಯೋಜನೆಯಂತೆ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 503

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ಪಿ. ಶಿವರಾಂ, ತಜ್ಞರು, ಜಿಲ್ಲಾ ಆಸ್ಪತ್ರೆ, ಬೆಳಗಾಂ ಇವರನ್ನು ಸೇವೆಯಿಂದ ವಜಾಗೊಳಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಪಿಜಿ(2) 53: 2003-04 ದಿನಾಂಕ: 16.12.2005.

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪ್ರಸ್ತಾವನೆಯಲ್ಲಿ ಡಾ: ಪಿ. ಶಿವರಾಂ, ತಜ್ಞರು, ಜಿಲ್ಲಾ ಆಸ್ಪತ್ರೆ, ಬೆಳಗಾಂ ಇವರು ದಿನಾಂಕ: 13.08.1997 ರಂದು ಸರ್ಕಾರಿ ಸೇವೆಗೆ ಸೇರಿದ್ದು ದಿನಾಂಕ: 06.02.2003 ರಿಂದ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾಗಿರುತ್ತಾರೆ. ಸದರಿ ವೈದ್ಯರನ್ನು ಅನಧಿಕೃತ ಗೈರುಹಾಜರಿಯ ಆರೋಪದ ಮೇಲೆ ದಿನಾಂಕ: 11.08.2003 ರಂದು ಸೇವೆಯಿಂದ ಅಮಾನತ್ತುಗೊಳಿಸಿ, ನಂತರ ದಿನಾಂಕ: 24.01.2004ರಲ್ಲಿ ದೋಷಾರೋಪಣಾ ಪಟ್ಟಿಯನ್ನೊಳಗೊಂಡಂತೆ ಕಾರಣ ಕೇಳುವ ನೋಟೀಸನ್ನು ಜಾರಿಗೊಳಿಸಲಾಗಿದ್ದರೂ ರಕ್ಷಣಾ ಹೇಳಿಕೆಯನ್ನು ಕೂಡಾ ಸಲ್ಲಿಸಿರುವುದಿಲ್ಲ ಹಾಗೂ ಸದರಿ ವೈದ್ಯರು ಇನ್ನೂ ಖಾಯಂ ಪೂರ್ವಸೇವಾ ಅವಧಿಯಲ್ಲಿದ್ದು, ಅನಧಿಕೃತ ಗೈರುಹಾಜರಿಯಾಗಿ ಕರ್ತವ್ಯ ಲೋಪ ಎಸಗಿರುವುದರಿಂದ ಸದರಿಯವರನ್ನು ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನ್) ನಿಯಮಾವಳಿ 1977ರ ಉಪ ನಿಯಮ 6(2)ರ ಪ್ರಕಾರ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ. ಅದರಂತೆ ಪರಿಶೀಲಿಸಿ, ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 45 ಹೆಚ್‌ಎಸ್‌ಹೆಚ್ 2006, ಬೆಂಗಳೂರು, ದಿನಾಂಕ:17ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಡಾ: ಶಿವರಾಂ, ತಜ್ಞರು, ಜಿಲ್ಲಾ ಆಸ್ಪತ್ರೆ, ಬೆಳಗಾಂ ಇವರು ದಿನಾಂಕ:06.02.2003 ರಿಂದ ಅನಧಿಕೃತ ಗೈರುಹಾಜರಾಗಿ ಖಾಯಂ ಪೂರ್ವ ಸೇವಾವಧಿಯಲ್ಲಿಯೇ ಕರ್ತವ್ಯಚ್ಯುತಿ ಎಸಗಿರುವುದರಿಂದ ಸದರಿಯವರನ್ನು ದಿನಾಂಕ: 06.02.2003 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ನಿಯಮ 6(2)ರ ಅಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ನಾರಾಯಣಗೌಡ**

ಪಿ.ಆರ್. 505

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು-1).